# ಪವಾಡಗಳ ರಹಸ್ಯ ಬಯಲು

## ನರೇಂದ್ರ ನಾಯಕ್





ಬಿಜೆಜೆವಿಜೆ-92

# ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು

ಇಂಡಿಯನ್ ಇನ್ಸ್‌ಟಿಟ್ಯೂಟ್ ಆಫ್ ಸೈನ್ಸ್ ಆವರಣ
ಬೆಂಗಳೂರು – 560 012

ವಿಜ್ಞಾನ ಪ್ರಚಾರಕ್ಕೆಂದೇ ಸ್ಥಾಪಿತವಾದ ರಾಜ್ಯ ಮಟ್ಟದ ಸ್ವಾಯತ್ತ ಸಂಸ್ಥೆ.

## ಧ್ಯೇಯೋದ್ದೇಶಗಳು

ರಾಜ್ಯದ ಜನತೆಯಲ್ಲಿ ವಿಜ್ಞಾನ ವಿಷಯಗಳನ್ನು ಪ್ರಚಾರ ಮಾಡುವುದು, ವೈಜ್ಞಾನಿಕ ಮನೋಧರ್ಮವನ್ನು ಬೆಳೆಸುವುದು.

ವಿಚಾರಗೋಷ್ಠಿ, ಉಪನ್ಯಾಸ, ತರಬೇತಿ ಶಿಬಿರ, ಸಾರ್ವಜನಿಕ ಚರ್ಚೆ, ಶೈಕ್ಷಣಿಕ ಪ್ರವಾಸ, ವಸ್ತು ಪ್ರದರ್ಶನ ಮುಂತಾದವುಗಳನ್ನು ಏರ್ಪಡಿಸುವುದು, ಕನ್ನಡದಲ್ಲಿ ವಿಜ್ಞಾನದ ಪುಸ್ತಕಗಳನ್ನು, ನಿಯತಕಾಲಿಕೆಗಳನ್ನು ಪ್ರಕಟಿಸುವುದು.

ವಿಜ್ಞಾನಕ್ಕೆ ಸಂಬಂಧಿಸಿದ ಸಂಘ ಸಂಸ್ಥೆಗಳನ್ನು ಗುರುತಿಸಿ ಅವುಗಳೊಂದಿಗೆ ಸಹಕರಿಸುವುದು, ಅವುಗಳಿಗೆ ಅವಶ್ಯಕವಾದ ಪ್ರೋತ್ಸಾಹ ಮತ್ತು ನೆರವು ನೀಡುವುದು.

ವಿಜ್ಞಾನವನ್ನು ಜನಪ್ರಿಯಗೊಳಿಸಲು ಆಸಕ್ತಿ ಇರುವವರನ್ನೆಲ್ಲ ಸಂಘಟಿಸುವುದು.

**ಸದಸ್ಯತ್ವದ ಶುಲ್ಕ :**

| | | |
|---|---|---|
| ಆಜೀವ ಸದಸ್ಯರು | : | ರೂ. 500.00 |
| ದಾನಿ ಸದಸ್ಯರು | : | ರೂ. 1000.00 |
| ದಾನಿ ಸಂಘ ಸಂಸ್ಥೆಗಳು | : | ರೂ. 2000.00 |



# ಪವಾಡಗಳ ರಹಸ್ಯ ಬಯಲು



ನರೇಂದ್ರ ನಾಯಕ್



ಭಾರತ ಜನ ಜ್ಞಾನ ವಿಜ್ಞಾನ ಜಾಥಾ – 1992
C/o ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು
ಭಾರತೀಯ ವಿಜ್ಞಾನ ಮಂದಿರ
ಬೆಂಗಳೂರು – 560 012

"Pavadagala Rahasya Bayalu" a book written by Narendra Nayak, Printed and Published by H.S. Niranjanaradhya, Secretary, Bharath Jana Gnana Vignana Jatha–1992, C/o Karnataka Rajya Vijnana Parishat, Indian Institute of Science campus, Bangalore – 560 012.

Page iv + 35 Price : Rs.12 /-



ಬೆಲೆ ರೂ. 12.00

ಮೊದಲನೆಯ ಆವೃತ್ತಿ 1992
ಎರಡನೆಯ ಆವೃತ್ತಿ 1995
ಮೂರನೆಯ ಆವೃತ್ತಿ 1996
ನಾಲ್ಕನೆಯ ಆವೃತ್ತಿ 1998
ಐದನೆಯ ಆವೃತ್ತಿ 1999



ಡಿ.ಟಿ.ಪಿ :– ಕೆ.ಎನ್. ವೆಂಕಟೇಶ್

ಮುಖ ಪುಟ, ಒಳ ಚಿತ್ರಗಳು :
ಕೆ. ಮಕಾಳಿ

ಒಳ ಪುಟ, ಮುಖ ಪುಟ ವಿನ್ಯಾಸ :
ಎಂ. ಹೆಚ್. ಶ್ರೀಧರ ಮೂರ್ತಿ

ಮುದ್ರಣ : ಗಾಯತ್ರಿ ಪ್ರಿಂಟ್ ಸಿಸ್ಟಮ್ಸ್
ಗಾಂಧಿನಗರ
ಬೆಂಗಳೂರು – 560 009

## ಲೇಖಕರ ಮಾತು

ಕರ್ನಾಟಕ ರಾಜ್ಯದ ಹಲವಾರು ಕಡೆಗಳಲ್ಲಿ ನಡೆಸಿ, ಪವಾಡಗಳೆಂದು ಜನ ಸಾಮಾನ್ಯರು ನಂಬುವ ಹಲವಾರು ವಿಷಯಗಳನ್ನು ನಡೆಸಲಾದ ನಮ್ಮ ಕಾರ್ಯಕ್ರಮದ ಕೆಲವು ಪ್ರಯೋಗಗಳ ಬಗ್ಗೆ ವಿವರಣೆಗಳನ್ನು ಕೊಡುವ ಉದ್ದೇಶದಿಂದ ಈ ಕಿರು ಪುಸ್ತಕವನ್ನು ಬರೆಯಲಾಗಿದೆ. ಇವುಗಳಲ್ಲಿ ಕೊಟ್ಟಿರುವ ವಿವರಣೆಗಳು ಸಾಮಾನ್ಯವಾಗಿ ಪವಾಡಗಳೆಂದು ನಂಬುವ ವಿಷಯಗಳ ಬಗ್ಗೆ ತಿಳಿಯದವರಿಗೆ ವಿಚಾರಗಳನ್ನು ತಿಳಿಸಲು ಸಹಾಯಕವಾದಾವು.

ಈ ಪುಸ್ತಕವು "ಪವಾಡ"ಗಳನ್ನು ನಡೆಸ ಬಯಸುವವರಿಗೆ ಯಾ ತಿಳಿಯದವರನ್ನು ಶೋಷಿಸಲು ಇಂತಹವುಗಳನ್ನು ಉಪಯೋಗಿಸಬಯಸುವವರಿಗೆ ಸಹಾಯಕವಾಗದಂತೆ ಅವುಗಳನ್ನು ಮಾಡುವ ವಿಧಾನಗಳನ್ನೂ ಸೂಕ್ಷ್ಮವಾಗಿ ವಿವರಿಸಿಲ್ಲ. ಯಾಕೆಂದರೆ, ಸುಲಭವಾಗಿ ಲಭ್ಯವಿರುವ ಈ ಪುಸ್ತಕದಲ್ಲಿರುವ ವಿಧಾನಗಳನ್ನು ವಂಚಕರು ಉಪಯೋಗಿಸಿಕೊಂಡು, ಆ ಬಳಿಕ ಅವುಗಳ ಸಹಾಯದಿಂದ ಮೂಲೆ -ಮೂಲೆಯ ಹಳ್ಳಿಗಳಿಗೆ ಹೋಗಿ ಮುಗ್ಧರನ್ನು ಶೋಷಿಸುವ ಸಾಧ್ಯತೆಯುಂಟು. ಇದಲ್ಲದೆ, ಎಲ್ಲಾ "ಪವಾಡ"ಗಳನ್ನು ಯಾರೂ ವಿವರಿಸಲು ಸಾಧ್ಯವಿಲ್ಲ. ಯಾಕೆಂದರೆ ವಂಚಕರು ಹೊಸ-ಹೊಸತವುಗಳನ್ನು ಕಲಿತು ಅವುಗಳ ಉಪಯೋಗದಿಂದ ತಿಳಿಯದವರನ್ನು ಮೋಸಮಾಡುವ ಹೊಸ ವಿಧಾನಗಳನ್ನು ಉಪಯೋಗಿಸುತ್ತಾರೆ. ಪವಾಡಗಳ ರಹಸ್ಯಗಳನ್ನು ಬಯಲು ಮಾಡುವುದು ಒಂದು ನಿರಂತರವಾದ ಕ್ರಿಯೆ. ಹೊಸ ಪವಾಡಗಳು ಹುಟ್ಟಿದಂತೆ ಅವುಗಳನ್ನು ಬಯಲಿಗೆಳೆಯುತ್ತಾ ಸಾಗಬೇಕು. ಇಂತಹವುಗಳನ್ನು ಪತ್ತೆ ಹಚ್ಚುವ ತೀಕ್ಷ್ಣತೆಯನ್ನು ಮೈಗೂಡಿಸಿಕೊಳ್ಳಬೇಕು. ಮಾತ್ರವಲ್ಲದೆ, ಈ ಕಾರ್ಯದಲ್ಲಿ ದಕ್ಷತೆಯನ್ನು ಬೆಳೆಸಿಕೊಳ್ಳಬೇಕು.

ವಿಜ್ಞಾನವು ಬರೇ ಪುಸ್ತಕದ ಬದನೆಕಾಯಿಯಾಗದೆ ನಮ್ಮ ದಿನನಿತ್ಯದ ಜೀವನದಲ್ಲಿ ಉಪಯುಕ್ತವಾಗುವ ವಿಷಯ. ವೈಜ್ಞಾನಿಕ ಮನೋಭಾವವನ್ನು ಬೆಳೆಸಿಕೊಳ್ಳುವುದು, ನಮ್ಮ ಜನ್ಮಸಿದ್ಧ ಹಕ್ಕು; ಇತರರಲ್ಲಿ ಬೆಳೆಸುವುದೂ ನಮ್ಮ ಕರ್ತವ್ಯವೆಂದು ತಿಳಿದುಕೊಂಡ ವೈಜ್ಞಾನಿಕ ಮನೋಭಾವವನ್ನು ಹೊಂದಿಕೊಂಡಿರುವ ನನ್ನ ಎಲ್ಲಾ ಹಿರಿಯ– ಕಿರಿಯ ಮಿತ್ರರಿಗೆ ಈ ಪುಸ್ತಕವು ಉಪಯುಕ್ತವಾದೀತೆಂಬ ಭರವಸೆ ನನಗಿದೆ.

ಹಲವಾರು ದಶಕಗಳಿಂದಲೂ ವಿಚಾರವಾದಿ ಮನೋಭಾವವನ್ನು ಹೊಂದಿದ ನನಗೆ ಬಂಧು- ಮಿತ್ರರೊಡನೆ ಚರ್ಚೆ ನಡೆಸುವಾಗ, ಅವರು ಅತಿಮಾನುಷ ಶಕ್ತಿಯಿಂದ ನಡೆಯುತ್ತವೆಂದು ಕೆಲವು ವಿಷಯಗಳನ್ನು ನನ್ನ ಗಮನಕ್ಕೆ ತಂದಾಗ, ಆ ಬಗ್ಗೆ ನಾನು ಸಾಧ್ಯವಾದಷ್ಟು ಆಲೋಚಿಸಿ, ಅವುಗಳ ಹಿಂದಿರುವ ವೈಜ್ಞಾನಿಕ ತತ್ವಗಳನ್ನು ವಿವರಿಸುತ್ತಿದ್ದೆ. ಆಗ ಎಲ್ಲಾ ವಿವರಗಳು ಮುಗಿದ ಮೇಲೆ ಬರುತ್ತಿದ್ದ ಪ್ರಶ್ನೆಯೊಂದೇ – "ಹಾಗಾದರೆ ನೀನು ಅವುಗಳನ್ನು ಮಾಡಿ ತೋರಿಸು" ಎಂದು. ಇವುಗಳ ಸರಿಯಾದ ತಂತ್ರಗಳನ್ನು ತಿಳಿಯದೆ, ಅವುಗಳನ್ನು ಮಾಡುವುದು ಹೇಗೆಂದು ಆಲೋಚಿಸುತ್ತಿರುವಾಗ, 1976–77ರಲ್ಲಿ ಡಾ||ಕೋವೂರ್‌ರ ಕಾರ್ಯಕ್ರಮವನ್ನು ಮಂಗಳೂರಿನಲ್ಲಿ ನಡೆಸುವ ಅವಕಾಶ ಸಿಕ್ಕಿತು. ಆಗ, ಕೆಲವು ಪವಾಡಗಳನ್ನು ಮಾಡುವ ಬಗ್ಗೆ ತಿಳಿದುಕೊಂಡೆ. ಮುಂದೆ, 1982, 84, 86ರಲ್ಲಿ ಪೂನೂರಿನ ಶ್ರೀ ಬಿ.ಪ್ರೇಮಾನಂದರವರಿಂದ ಕೆಲವು ಕಾರ್ಯಕ್ರಮಗಳನ್ನು ನಡೆಸಲಾಯಿತು. ಇವರು ಮೂರನೇ ಬಾರಿ ನಮ್ಮ ಜಿಲ್ಲೆಗೆ ಬಂದಾಗ – ಇನ್ನು ಮುಂದೆ ಈ ಜಿಲ್ಲೆಗೆ ಕಾರ್ಯಕ್ರಮಗಳನ್ನು ಕೊಡಲು ತಾನು ಬರುವುದಿಲ್ಲವೆಂದು ಖಡಾಖಂಡಿತವಾಗಿ ತಿಳಿಸಿ, ಈ ಕಾರ್ಯಕ್ರಮವನ್ನು ನಾನು ಮುಂದುವರಿಸಬೇಕೆಂದು ತಾಕೀತು ಮಾಡಿದರು.

1987ರ ಭಾರತ ಜನ ವಿಜ್ಞಾನ ಜಾಥಾದ ಜಾಥಾ ಪೂರ್ವ ಕಾರ್ಯಕ್ರಮವಾಗಿ ಆರಂಭಮಾಡಿದ ಈ ಕಾರ್ಯಕ್ರಮವು ಈಗ 300ರಷ್ಟು ಪ್ರಯೋಗಗಳನ್ನು ರಾಜ್ಯಾದ್ಯಂತ ಕಂಡಿದೆ. ಇದಲ್ಲದೆ, ಮಾಡಿತೋರಿಸು ಎಂಬ ಸವಾಲು ಕೊಟ್ಟವರಿಗೆ ಸೂಕ್ತವಾದ ಉತ್ತರವನ್ನೂ ಕೊಟ್ಟಿದೆ. ಯಾಕೆಂದರೆ, ಮಾಡಿ ತೋರಿಸುವುದು ನಾನು ಮಾತ್ರವಲ್ಲ, ಹೆಚ್ಚಿನ "ಪವಾಡ"ಗಳನ್ನು ಯಾವುದೇ ತರಬೇತಿಯಿಲ್ಲದ ಜನ ಸಾಮಾನ್ಯರೂ ಮಾಡ ಬಹುದೆಂಬ ಸತ್ಯವನ್ನೂ ಮನದಟ್ಟು ಮಾಡಿದೆ.

ಕಾರ್ಯಕ್ರಮಗಳನ್ನು ನಡೆಸುತ್ತಾ ಬಂದಂತೆ, ಹೊಸ- ಹೊಸ "ಪವಾಡ"ಗಳನ್ನು ಬಯಲಿಗೆಳೆದಿದ್ದೇವೆ. ಇದೆಲ್ಲವೂ ನಮ್ಮ ವಿಚಾರವಾದಿ ಗೆಳೆಯರ ಸಹಕಾರದಿಂದ ಸಾಧ್ಯವಾಯಿತು. ಈ ಪುಸ್ತಕವನ್ನು ಪ್ರಕಟಿಸುವ ಹೊಣೆ ಹೊತ್ತ ಬಿ.ಜೆ.ವಿ.ಜೆ – 92ರ ರಾಜ್ಯ ಸಂಘಟನಾ ಸಮಿತಿಗೆ ನನ್ನ ಕೃತಜ್ಞತೆಗಳು.

ಮಂಗಳೂರು. ನರೇಂದ್ರ ನಾಯಕ್

# ಪವಾಡಗಳೆಂದರೆ ಏನು?

ಸಾಮಾನ್ಯವಾಗಿ ನಮಗೆ ಮಾಡಲು ಅಸಾಧ್ಯವಾಗಿರುವ, ಅತೀಂದ್ರಿಯ, ಅತಿಮಾನುಷ ಶಕ್ತಿಯಿಂದ ನಡೆಯುತ್ತವೆಂದು ಹೇಳಿಕೊಳ್ಳುವ ಕೆಲವು ಘಟನೆಗಳನ್ನು ಪವಾಡಗಳೆನ್ನಬಹುದು. ವಾಸ್ತವವಾಗಿ ಇವು ಇಂತಹ ಶಕ್ತಿಗಳಿಂದ ನಡೆಯುತ್ತವೆಯೇ? ಇಂತಹ ಶಕ್ತಿ ಯಾರಿಗಾದರೂ ಇದೆಯೇ ಎಂಬುದು ನಮ್ಮೆಲ್ಲರ ಮನಸ್ಸಿನಲ್ಲಿ ಮೂಡುವ ಪ್ರಶ್ನೆ.

ನಮ್ಮ ಕಣ್ಣೆದುರಿನಲ್ಲಿಯೇ ಇಂತಹ ಘಟನೆಗಳು ನಡೆದಾಗ, ಇವುಗಳಿಗೆ ನಮ್ಮಿಂದ ವಿವರಣೆಗಳನ್ನು ಕಂಡು ಹುಡುಕಲು ಅಸಾಧ್ಯವಾದಾಗ ಯಾ ನಾವು ಉನ್ನತ ಸ್ಥಾನದಲ್ಲಿರಿಸಿರುವ ಇವುಗಳನ್ನು ವ್ಯಕ್ತಿಗಳೂ ನಂಬಿ ಅವುಗಳನ್ನು ಮಾಡುವವರ ಕಾಲಿಗೆ ಬಿದ್ದಾಗ ನಾವು ಸ್ಥಂಬಿಭೂತರಾಗಿ ಈ ಘಟನೆಗಳು ಪವಾಡಗಳೇ ಇರಬೇಕೆಂದು ನಂಬುವ ಸಾಧ್ಯತೆಗಳಿವೆ. ಈ ಘಟನೆಗಳನ್ನು ವೈಜ್ಞಾನಿಕ ದೃಷ್ಟಿಕೋನದಿಂದ ಗಮನಿಸದೇ, ಇವುಗಳನ್ನು ಸತ್ಯವೆಂದು ಸ್ವೀಕರಿಸಬಾರದು.

ವೈಜ್ಞಾನಿಕ ದೃಷ್ಟಿಕೋನದಿಂದ ಗಮನಿಸುವುದೆಂದೊಡನೆ, ನಾವು ವಿಜ್ಞಾನಿಗಳನ್ನು ಉದಾಹರಿಸುತ್ತೇನೆ. ಯಾಕೆಂದರೆ, ಕೆಲವು ಉನ್ನತ ವಿಜ್ಞಾನಿಗಳೂ ಇಂತಹ ಪವಾಡಗಳನ್ನು ನಂಬುವವರಿರುತ್ತಾರೆ. ಇವರು ಅಪ್ರಾಮಾಣಿಕರೆ? ಎಂಬ ಪ್ರಶ್ನೆ ಉದ್ಭವವಾಗುತ್ತದೆ. ವಾಸ್ತವವಾಗಿ ನಮ್ಮ ವಿಜ್ಞಾನಿಗಳು ತಮ್ಮ ಪ್ರಯೋಗ ಶಾಲೆಗಳಲ್ಲಿ ಮಾತ್ರ ವೈಜ್ಞಾನಿಕ ಮನೋಭಾವವುಳ್ಳವರಾಗಿರುತ್ತಾರೆ ಮಾತ್ರವಲ್ಲದೆ, ಪ್ರಯೋಗಗಳನ್ನು ನಡೆಸುವ, ಅರ್ಥಾತ್ ಪವಾಡಗಳನ್ನು ಮಾಡುವ ವ್ಯಕ್ತಿಗಳು ಪ್ರಾಮಾಣಿಕರೆಂದು ನಂಬಿರುತ್ತಾರೆ. ವಾಸ್ತವವಾಗಿ ಇಂತಹ ವ್ಯಕ್ತಿಗಳನ್ನು ಪರೀಕ್ಷಿಸಲು ಬೇರೆಯೇ ದೃಷ್ಟಿಕೋನಬೇಕು. ಇದು ನಮ್ಮ ಹೆಚ್ಚಿನ ವಿಜ್ಞಾನಿಗಳಲ್ಲಿಲ್ಲ. ಇಷ್ಟಲ್ಲದೆ, ಕೆಲವು ವಿಜ್ಞಾನಿಗಳು, ಬುದ್ಧಿಜೀವಿಗಳು ತಮ್ಮ ಸ್ಥಾಪಿತ ಹಿತಾಶಕ್ತಿಗಳನ್ನು ಬೆಳೆಸಿಕೊಳ್ಳಲು ಇಂತಹ ಪವಾಡ ಪುರುಷರುಗಳ ಆಸ್ಥಾನಗಳಲ್ಲಿರುತ್ತಾರೆ! ಈ ಪವಾಡ ಪುರುಷರಿಗೆ ಇವರು ತಮ್ಮೊಂದಿಗಿರುವುದು ಒಂದು ಅರ್ಹತಾ ಪತ್ರದಂತೆ! ತತ್ಕಾರಣ, ಇಂತಹವರನ್ನು ಸ್ವಾಗತಿಸಲು ಬಹಳ ಆತುರದಿಂದ ಇರುತ್ತಾರೆ

ನಮ್ಮ ಕಣ್ಣೆದುರಿನಲ್ಲಿಯೇ ಇಂತಹ ಘಟನೆಗಳು ನಡೆದಾಗ ಅವುಗಳನ್ನು ಪತ್ತೆಹಚ್ಚಲು ಬೇಕಾದ ಸೂಕ್ಷ್ಮದೃಷ್ಟಿ, ತರ್ಕ ಇತ್ಯಾದಿಗಳನ್ನು ಬೆಳೆಸಿಕೊಳ್ಳುವುದು ನಮ್ಮೆಲ್ಲರ ಆದ್ಯ ಕರ್ತವ್ಯ.

"ಪವಾಡ"ಗಳನ್ನು ಸಾಮಾನ್ಯವಾಗಿ ಭೌತಶಾಸ್ತ್ರದ ತತ್ವಗಳನ್ನು. ರಾಸಾಯನಿಕಗಳನ್ನು. ಮನಸ್ಸಿಗೆ ಭ್ರಾಂತಿ ಮಾಡುವವುಗಳನ್ನು ನೋವು ನಿಗ್ರಹಿಸುವಂತಹವುಗಳು. ಮತ್ತು ಇತರ ಕೆಲವು ತತ್ವಗಳನ್ನು ಉಪಯೋಗಿಸುವವುಗಳನ್ನಾಗಿ ವಿಂಗಡಿಸಬಹುದು.

ಮುಂದಿನ ಅಧ್ಯಾಯಗಳಲ್ಲಿ ಇವುಗಳನ್ನು ವಿಂಗಡಿಸಿ. ಆಯಾ ರೀತಿಯ "ಪವಾಡ"ಗಳನ್ನು ಯಾವೆಲ್ಲಾ ತತ್ವಗಳ ಮೇಲೆ ಆಧರಿಸಲಾಗಿದೆಯೆಂದು ವಿವರಿಸಲಾಗುವುದು. ಸಾಮಾನ್ಯವಾಗಿ ಇವುಗಳನ್ನು ಮಾಡಲು ಬಯಸುವವರು ಈ ಬಗ್ಗೆ ಹೆಚ್ಚಿನ ಮಾಹಿತಿಗಾಗಿ ತಮ್ಮ ಸಮೀಪದಲ್ಲಿ ನಡೆಯಲಿರುವ "ಪವಾಡ ರಹಸ್ಯ ಬಯಲು" ಕಾರ್ಯಕ್ರಮವನ್ನು ವೀಕ್ಷಿಸಬಹುದು. ಇಂತಹ ಕಾರ್ಯಕ್ರಮಗಳು ಭಾರತೀಯ ಜನ ವಿಜ್ಞಾನ ಜಾಥಾ – II ರ ಅಂಗವಾಗಿ ಕರ್ನಾಟಕ ರಾಜ್ಯದ ಕೆಲವು ಸಾವಿರ ಕಡೆಗಳಲ್ಲಿ 1992ರಲ್ಲಿ ನಡೆಯಲಿವೆ. ಈ ಕಾರ್ಯಕ್ರಮಗಳನ್ನು ನಡೆಸುವವರು ಇವುಗಳ ಬಗ್ಗೆ ಹೆಚ್ಚಿನ ವಿವರಗಳನ್ನು ನೀಡಲಿದ್ದಾರೆ.



# ಬೆಂಕಿಯೊಂದಿಗೆ ನಡೆಯುವ ಪವಾಡಗಳು

ಬೆಂಕಿಯೆಂದರೆ ಮನುಷ್ಯನು ಆದಿಕಾಲದಿಂದಲೂ ಈ ಬೆಂಕಿಯೊಂದಿಗೆ ಆಟವಾಡುವುದು ಯಾ ಅದು ಸುಡುವುದಿಲ್ಲವೆಂದು ತೋರಿಸಿದೊಡನೆ ಇದನ್ನು ಮಾಡಿದ. ವ್ಯಕ್ತಿಗೆ ವಿಶೇಷವಾದ ಶಕ್ತಿಯೊಂದು ನಂಬುಗೆಯನ್ನುಂಟು ಮಾಡುವುದು ಸುಲಭ. ಬೆಂಕಿಯೊಂದಿಗೆ ನಡೆಸಲಾಗುವ ಕೆಲವು "ಪವಾಡ"ಗಳನ್ನು ಇಲ್ಲಿ ವಿವರಿಸುತ್ತೇವೆ.

**ಕರ್ಪೂರಾರತಿ**

ಕರ್ಪೂರಾರತಿಯೆಂದರೆ ಸಾಮಾನ್ಯವಾಗಿ ಪೂಜಾ ಸ್ಥಳಗಳಲ್ಲಿ ನಡೆಯುವ ಕ್ರಿಯೆ. ಹೆಚ್ಚಿನ ಸ್ಥಳಗಳಲ್ಲಿ ಕರ್ಪೂರವನ್ನು ತಟ್ಟೆಗಳಲ್ಲಿಟ್ಟು ಆರತಿ ಮಾಡಲಾಗುತ್ತದೆ. ಆದರೆ. ಕೆಲವರು ತಮ್ಮ ವಿಶೇಷ ಶಕ್ತಿಯನ್ನು ತೋರಿಸಲು ಕರ್ಪೂರವನ್ನು ಅಂಗೈಯಲ್ಲಿರಿಸಿ ಬೆಂಕಿ ಹಚ್ಚಿ ಅದರಿಂದ ಆರತಿ ಮಾಡುತ್ತಾರೆ. ನೋಡುವವರಿಗೆ ಇದು ಅತ್ಯದ್ಭುತವಾಗಿ ತೋರುವುದು. ಆರತಿ ಮಾಡಿದ ಬಳಿಕ. ಆ ಉರಿಯುತ್ತಿರುವ ಕರ್ಪೂರವನ್ನು ಬಾಯಿಗೆ ಹಾಕಿಕೊಂಡು ಇನ್ನೂ ಹೆಚ್ಚಿನ ಆಶ್ಚರ್ಯವನ್ನುಂಟುಮಾಡುತ್ತಾರೆ. ಇಂತಹ ಹಲವಾರು ಪವಾಡ ಪುರುಷರುಗಳು ನಮ್ಮ ರಾಜ್ಯದ ಮಾಲೆ- ಮೂಲೆಗಳಲ್ಲೂ ಇದ್ದಾರೆ.

ಈ ಕರ್ಪೂರಾರತಿಯನ್ನು ನಡೆಸುವುದು ಹೇಗೆ? ಮುಖ್ಯವಾಗಿ, ಇದನ್ನು ಮಾಡಲು ಸ್ವಲ್ಪ ದಪ್ಪಗಿರುವ ಕರ್ಪೂರ ತುಂಡುಗಳು ಬೇಕು. ಇವುಗಳನ್ನು ಕೈಯಲ್ಲಿ ಹಿಡಿದು ಬೆಂಕಿ ಹಚ್ಚಿ ಆರತಿ ಮಾಡುತ್ತಾ ಕೈಯಿಂದ ಕೈಗೆ ವರ್ಗಾವಣೆ ಮಾಡುತ್ತಲಿರಬೇಕು. ತುಂಡು ಬಿಸಿಯೇರಿದಾಗ ಅದನ್ನು ಬಾಯಿಗೆ ಹಾಕಿಕೊಂಡು ಬಾಯಿ ಮುಚ್ಚಿದರಾಯಿತು.

ಕರ್ಪೂರವು ಒಂದು ವಿಶೇಷವಾದ ರಸಾಯನಿಕ. ಇದು ನೇರವಾಗಿ ಘನರೂಪದಿಂದ ಆವಿಯಾಗುವ ವಸ್ತು. ಇದಕ್ಕೆ ಉತ್ಪತನ (Sublimation) ಎನ್ನಲಾಗುತ್ತದೆ. ತತ್ಕಾರಣ, ಉರಿಯುವ ಕರ್ಪೂರ ಕೈಯಲ್ಲಿ ಕೆಲವೇ ಸೆಕೆಂಡುಗಳ ಕಾಲ ಇದ್ದರೆ ಕೈಸುಡುವುದಿಲ್ಲ. ಇದನ್ನು ಬಾಯಿಗೆ ಹಾಕಿಕೊಂಡಾಗ ಬಾಯಲ್ಲಿ ಸಹಜವಾಗಿರುವ ಜೊಲ್ಲು ಈ ಶಾಖದಿಂದ ರಕ್ಷಿಸುವ ತೇವ ಪದರವಾಗಿ ಕಾರ್ಯವಹಿಸುತ್ತದೆ. ಬಾಯಿ ಮುಚ್ಚಿದಾಗ ಆಮ್ಲಜನಕದ ಕೊರತೆಯಿಂದ ಉರಿಯುವಿಕೆಯು ನಿಂತು, ಅದು ಆರಿಹೋಗುತ್ತದೆ.

ಈ ತತ್ವವನ್ನು ಉಪಯೋಗಿಸುವ ಕೆಲವು ಮಂದಿ ತಮ್ಮಲ್ಲಿ ವಿಶೇಷ ಶಕ್ತಿಯಿದೆ ಎಂದುಕೊಂಡು ಜನರನ್ನು ಮೋಸಮಾಡುತ್ತಾರೆ. ಇದನ್ನು ನಾವು ಯಾರೂ ಅತಿ ಸುಲಭವಾಗಿ ಮಾಡಬಹುದು. ಆದರೆ, ಒಂದು ವಿಷಯ ನೆನಪಿರಲಿ – ಕೃತಕ ನೂಲು

ಬಟ್ಟೆಗಳನ್ನು ಧರಿಸಬೇಡಿ. ಈ ಪ್ರಯೋಗಕ್ಕೆ ಕರ್ಪೂರ ಮಾತ್ರ ಸೂಕ್ತ. ಮೇಣ (Candle) ಹಿಡಿದು ಈ ಪ್ರಯೋಗ ಮಾಡಿದಲ್ಲಿ ಆಸ್ಪತ್ರೆ ಸೇರಬೇಕಾದೀತು!

## ಕೊಳ್ಳಿ ಹಚ್ಚಿಕೊಳ್ಳುವುದು

ಕೆಲವರು ತಮ್ಮಲ್ಲಿ ಬೆಂಕಿಯ ಶಾಖವನ್ನು ತಡೆಯುವ ಶಕ್ತಿಯಿದೆಯೆಂದುಕೊಂಡು ಸೀಮೆಎಣ್ಣೆಯೊ ಹರಳೆಣ್ಣೆಯ ಉರಿಯುವ ಕೊಳ್ಳಿಯನ್ನು ಮೈಕೈಗಳಿಗೆ ಸವರಿಕೊಳ್ಳುತ್ತಾರೆ. ಬೆಂಕಿ ಇವರನ್ನು ಸುಡದಿರಲು ತಮ್ಮಲ್ಲಿರುವ ದೈಹಿಕ ಶಕ್ತಿ ಕಾರಣವೆನ್ನುತ್ತಾರೆ.

ಈ ಕೊಳ್ಳಿ ತಾಗಿಸಿಕೊಳ್ಳುವ ರಹಸ್ಯವೇನು? ಮುಖ್ಯವಾಗಿ ಈ ಕೊಳ್ಳಿಯನ್ನು ರಚಿಸಲು ಹತ್ತಿ ಬಟ್ಟೆಯನ್ನು ಉಪಯೋಗಿಸಲಾಗುತ್ತದೆ. ಮರದ ತುಂಡಿಗೆ ಯಾ ಒಂದು ಕೊಡೆಯ ಕಡ್ಡಿಗೆ ಹತ್ತಿ ಬಟ್ಟೆ ಚಿಂದಿಗಳನ್ನು ಸುತ್ತಿ. ಅವುಗಳನ್ನು ಎಣ್ಣೆಯೊಳಗೆ ಮುಳುಗಿಸಿ ಬೆಂಕಿ ಹಚ್ಚಿ. ಅದನ್ನು ಮೈಮೇಲೆ ಆಡಿಸಲಾಗುತ್ತದೆ. ಮೈ-ಕೈಗೆ ರೋಮಗಳಿದ್ದಲ್ಲಿ ಅವು ಸುಟ್ಟು ಹೋಗಬಹುದು. ಆದರೆ. ಇತರ ಯಾವುದೇ ಅಪಾಯವಾಗುವುದಿಲ್ಲ.

ಚಲಿಸುವ ಬೆಂಕಿ ಸುಡುವುದಿಲ್ಲ - ಈ ತತ್ವವನ್ನು ನಾವು ನೆನಪಿಡಬೇಕು. ಕೊಳ್ಳಿಯನ್ನು ಮೈಕೈಗಳಿಗೆ ಹಚ್ಚಿಸಿಕೊಳ್ಳುವವರು ಈ ಕೊಳ್ಳಿಯನ್ನು ಚಲಿಸುತ್ತಿರುತ್ತಾರೆ. ಹೆಚ್ಚಾಗಿ ಈ



ಕೊಳ್ಳಿಯನ್ನು ಮರ ಇತ್ಯಾದಿ ಶಾಖ ನಿರೋಧಕ ವಸ್ತುವಿನಿಂದಲೂ ರಚಿಸಿರುತ್ತಾರೆ. ತತ್ತಕ್ಷಣ ಇದು ಸುಡುವುದಿಲ್ಲ.

ಆದರೆ, ಇಲ್ಲಿ ನೆನಪಿಡಬೇಕಾದ ಕೆಲವು ವಿಷಯಗಳಿವೆ. ಹತ್ತಿ ಬಟ್ಟೆಯನ್ನು ಮಾತ್ರ ಕೊಳ್ಳಿ ಮಾಡಲು ಉಪಯೋಗಿಸಬೇಕು. ಉರಿಸಲು ಸೀಮೆ ಎಣ್ಣೆ ಯಾ ಇತರ ಸುಲಭವಾಗಿ ಆವಿಯಾಗದಂತಹ ಎಣ್ಣೆ ಉಪಯೋಗಿಸಬೇಕು. ಕೊಳ್ಳಿಯನ್ನು ಚಲಿಸುತ್ತಲಿರಬೇಕು. ಪ್ರಯೋಗ ನಡೆಸುವವರು ಹತ್ತಿ ಬಟ್ಟೆಗಳನ್ನೇ ಧರಿಸಬೇಕು.

## ಕೆಂಡದ ಮೇಲೆ ನಡೆಯುವುದು.

ಕೆಂಡಗಳ ಮೇಲೆ ನಡೆಯುವುದು ಯಾ ಕೊಂಡ ಹಾಯುವುದು. ಅನೇಕ ಮತಾನುಯಾಯಿಗಳು ತಮ್ಮ ಧರ್ಮ ಶ್ರದ್ಧೆಯನ್ನು ತೋರಿಸಿಕೊಳ್ಳಲು ಉಪಯೋಗ ಮಾಡುವ ವಿಧಾನ.

ತಗ್ಗು ತೋಡಿ ಅದರಲ್ಲಿ ಸೌದೆ ರಾಶಿ ಹಾಕಿ ಬೆಂಕಿ ಉರಿಸಲಾಗುತ್ತದೆ. ಆ ಬಳಿಕ ಕೆಂಡಗಳನ್ನು ಸೇರಿಸಿ, ತಟ್ಟಿ ಅವುಗಳಲ್ಲಿರುವ ದೊಡ್ಡವನ್ನು ಹೊರತೆಗೆದು ಸಮತಟ್ಟಾಗಿ ಮಾಡಲಾಗುತ್ತದೆ. ಆ ಬಳಿಕ ಗಾಳಿ ಹಾಕಿ, ಈ ಕೆಂಡಗಳು ನಿಗಿ – ನಿಗಿ ಉರಿಯುವಾಗ ಅದರ ಮೇಲೆ "ಶುದ್ಧ "ದಲ್ಲಿರುವ ಭಕ್ತರನ್ನು ನಡೆಸಲಾಗುತ್ತದೆ. ಅವರ ಕಾಲುಗಳು ಸುಡದಿರುವುದಕ್ಕೆ ದೈವೀಕ ಶಕ್ತಿಯೇ ಕಾರಣವೆಂದು ತಿಳಿಸಲಾಗುತ್ತದೆ. ಯಾರಿಗಾದರೂ, ಅಪ್ಪಿ– ತಪ್ಪಿ ಗುಳ್ಳೆಗಳಿದ್ದಲ್ಲಿ ಯಾ ಕಾಲು ಸುಟ್ಟು ಹೋದಲ್ಲಿ ಅವರು "ಶುದ್ಧವಲ್ಲ" ಇರಲಿಲ್ಲವೆಂಬ ವಿವರಣೆ ಕೊಡಲಾಗುತ್ತದೆ!

ಆದರೆ, ನೆನಪಿಡಬೇಕಾದ ವಿಷಯಗಳು ಕೆಲವಿವೆ. ನಡೆಯುವ ಮೊದಲು ಗಾಳಿ ಬೀಸಿ, ಬೂದಿಯನ್ನು ಹಾರಿಸಬೇಕು. ಹೆಚ್ಚಿನ ಬೂದಿಯಿದ್ದಲ್ಲಿ ಉಪ್ಪನ್ನು ಹಾಕಿ, ಗಾಳಿ ಬೀಸಿ, ಆ ಉಪ್ಪಿನ ಕಣಗಳು ಸಿಡಿಯುವುದು ನಿಂತ ಬಳಿಕವೇ ನಡೆಯಬೇಕು. ಮುಖ್ಯವಾಗಿ ಅಡೆತಡೆಯಿಲ್ಲದೆ ನೇರವಾಗಿ ನಡೆಯಬೇಕು. ಕೆಂಡದ ಮೇಲೆ ನಡೆಯುವ ದೊಡ್ಡ ಗುಂಪಿದ್ದರೆ ಅವರನ್ನು ಸಾಲಾಗಿ ನಿಲ್ಲಿಸಿ ಒಬ್ಬರ ಹಿಂದೊಬ್ಬರನ್ನು ಒಂದೇ ದಿಕ್ಕಿನಲ್ಲಿ ನಡೆಸಬೇಕು. ಕೆಂಡಗಳೊಂದಿಗೆ ಲೋಹದ ಚೂರುಗಳು, ಕಲ್ಲುಗಳು, ಗಾಜಿನ ತುಂಡುಗಳು ಬಾರದಂತೆ ಜಾಗ್ರತೆ ವಹಿಸಬೇಕು. ಯಾಕೆಂದರೆ ಕೆಲವೊಮ್ಮೆ ನಮ್ಮ ಕಾರ್ಯಕ್ರಮವನ್ನು ಹಾಳು ಮಾಡ ಬಯಸುವವರು ನಾವು ಮಾಡಿದ ಬೆಂಕಿಗೆ ಇಂತಹವುಗಳನ್ನು ಹಾಕುತ್ತಾರೆ! ಸೀರೆ ಉಟ್ಟವರು ಅದನ್ನು ಮೊಣಕಾಲವರೆಗೆ ಎತ್ತಿ ನಡೆಯುವುದು ಉತ್ತಮ. ಪ್ಯಾಂಟು– ಪೈಜಾಮ– ಧೋತಿ ಧರಿಸಿರುವವರು ಅವನ್ನು ಮೊಣ ಕಾಲವರೆಗೆ ಮಡಿಸಬೇಕು. ಬೂಟ್ಸು, ಕಾಲು ಚೀಲಧರಿಸಿರುವವರು ಕಾಲಿಗೆ ಬಿಸಿ ತಾಗಿದಲ್ಲಿ ಕೆಂಡ ಹಾದ ಮೇಲೆ ಅವುಗಳನ್ನು ಧರಿಸದೆ ಕಾಲನ್ನು ಗಾಳಿಗೆ ಬಿಡುವುದು ಉತ್ತಮ. ಬರಿಗಾಲಲ್ಲಿ ಓಡುವ

ಅಭ್ಯಾಸವಿಲ್ಲದವರು ಕೆಂಡ ಹಾಯುವುದಾದರೆ ಕೆಂಡಗಳನ್ನು ಮಾಡುವ ತಗ್ಗು ಅಡಿಗಿಂತ ಉದ್ದವಿಲ್ಲದಂತಿರುವುದು ಸೂಕ್ತ.

## ತಲೆಯ ಮೇಲೆ ನೀರು ಕುದಿಸುವುದು!

ಕೆಲವರು ತಮ್ಮ "ಭಕ್ತಿ"ಯನ್ನು ತೋರಿಸಲು ತಲೆಯ ಮೇಲೆ ಬಟ್ಟೆ ಹಾಕಿ. ಅದರ ಮೇಲೆ ಬೆಂಕಿಯಿಟ್ಟು. ನೀರು ಕುದಿಸುವುದು ಯಾ ಚಹಾ ತಯಾರಿ ಮಾಡುವುದನ್ನು ಮಾಡುತ್ತಾರೆ. ಇವರಿಗೆ ಯಾವುದೇ ಅಪಾಯವಾಗದಿರಲು ತಮ್ಮ "ಭಕ್ತಿ" ಯಾ "ದೈವಿಕ ಶಕ್ತಿ" ಕಾರಣವೆಂಬುದು ಸಾಮಾನ್ಯವಾದ ನಂಬಿಕೆ.

ತಲೆಯ ಮೇಲೆ ನೀರು ಬಿಸಿ ಮಾಡುವುದು ಹೇಗೆ? ಮೊದಲನೆಯದಾಗಿ. ಈ ಪ್ರಯೋಗ ನಡೆಸಲು ತಲೆಯ ಮೇಲೆ ಸ್ವಲ್ಪ ಹೆಚ್ಚಿನ ಕೂದಲಿರುವವರನ್ನೇ ಆರಿಸಲಾಗುತ್ತದೆ. ದಪ್ಪವಾದ ಟವೆಲನ್ನು ನೀರಿನಲ್ಲಿ ಒದ್ದೆ ಮಾಡಿ. ಅದನ್ನು ತಲೆ ಮೇಲಿರಿಸಲಾಗುತ್ತದೆ. ಆ ಬಳಿಕ. ಸೀಮೆ ಎಣ್ಣೆಯಲ್ಲಿ ಮುಳುಗಿಸಿದ. ಬಟ್ಟೆ ಸುತ್ತಿದ. ಲೋಹದ ಉಂಗುರಾಕೃತಿಯ ಒಂದು ಪರಿಕರವನ್ನು ತಲೆ ಮೇಲಿರಿಸಿ. ಅದಕ್ಕೆ ಬೆಂಕಿ ಕೊಡಲಾಗುತ್ತದೆ. ಈ ಬೆಂಕಿಯ ಶಾಖದಿಂದ ಅಲ್ಯುಮಿನಿಯಂನ ಪಾತ್ರೆಯಲ್ಲಿರುವ ನೀರನ್ನು ಕುದಿಯುವವರೆಗೆ ಬಿಸಿ ಮಾಡಲಾಗುತ್ತದೆ.

ಈ ನೀರು ಕುದಿಸುವಾಗ ತಲೆಗೆ ಯಾವುದೇ ಅಪಾಯವಾಗದಿರಲು ಕಾರಣವೇನು? ಇಲ್ಲಿ ನೆನಪಿಡಬೇಕಾದ ಮುಖ್ಯಾಂಶವೇನೆಂದರೆ. ತಲೆ ಮೇಲಿಡುವ ದಪ್ಪವಾದ ಟವೆಲನ್ನು ನೀರಿನಲ್ಲಿ ಒದ್ದೆ ಮಾಡಲಾಗುತ್ತದೆ. ಎಲ್ಲಿಯವರೆಗೆ ಟವೆಲ್ ಒದ್ದೆಯಿರುವುದೋ ಅಲ್ಲಿಯವರೆಗೆ ಉಷ್ಣತೆ $100^{0}$ ಸೆಂಟಿಗ್ರೇಡ್‌ಗಿಂತ ಹೆಚ್ಚಾಗದು! ಇದಲ್ಲದೆ. ದಪ್ಪವಾದ ತಲೆ ಕೂದಲಿರುವವರನ್ನು ಪ್ರಯೋಗಕ್ಕಾಗಿ ಉಪಯೋಗಿಸಿಕೊಂಡಲ್ಲಿ, ಇವರ ತಲೆ ಕೂದಲುಗಳ ಮಧ್ಯವಿರುವ ಗಾಳಿಯು ಶಾಖ ನಿರೋಧಕವಾಗಿ ಕಾರ್ಯ ವಹಿಸುವುದು.

ಆದರೆ. ಇಲ್ಲಿಯೂ ನೆನಪಿಡಬೇಕಾದ ಕೆಲವು ವಿಷಯಗಳಿವೆ. ಪ್ರಯೋಗಕ್ಕೆ ಆರಿಸಿಕೊಂಡವರು ಮನೋಸ್ಥೈರ್ಯವುಳ್ಳವರಾಗಿರಬೇಕು. ಉಪಯೋಗಿಸುವ ಟವಲು ದಪ್ಪವಾಗಿರಬೇಕು. ನೀರನ್ನು ಕುದಿಸಲು ಅಲ್ಯುಮೀನಿಯಂನ ಪಾತ್ರೆಯನ್ನೇ ಉಪಯೋಗಿಸುವುದು ಅಗತ್ಯ.

## ಶಾಖವಿಲ್ಲದ ಬೆಂಕಿ

ಬಟ್ಟೆಯನ್ನು ಒಂದು ದ್ರಾವಣದಲ್ಲಿ ಅದ್ದಿ ತೆಗೆಯಲಾಗುತ್ತದೆ. ಆ ಬಳಿಕ ಇದಕ್ಕೆ ಬೆಂಕಿ ಹಚ್ಚಲಾಗುವುದು. ಬೆಂಕಿ ಉರಿಯುವುದು. ಆದರೂ. ಬಟ್ಟೆಗೆ ಏನೂ ಆಗುವುದಿಲ್ಲ. ಇದಕ್ಕೆ ಕಾರಣ ತಮ್ಮ "ದೈವಿಕ ಶಕ್ತಿ" ಎಂಬ ವಿವರಣೆ.

ಇಲ್ಲಿ ಈ ಪ್ರಯೋಗದ ತತ್ವವೇನು? ಇಥೈಲ್ ಆಲ್ಕೋಹಾಲು ಮತ್ತು ನೀರಿನ ಮಿಶ್ರಣದಲ್ಲಿ ಈ ಬಟ್ಟೆಯನ್ನು ಮುಳುಗಿಸುತ್ತಾರೆ. ಆ ಬಳಿಕ ಬೆಂಕಿ ಕೊಟ್ಟಾಗ ಆಲ್ಕೋಹಾಲು ಉರಿದು, ನೀರು ಆವಿಯಾಗಿ ಉಷ್ಣತೆಯು $100^{0}$ ಸೆಂಟಿಗ್ರೇಡ್‌ಗಿಂತ ಕಡಿಮೆಯೇ ಇರುವುದು. ಈ "ಪವಾಡ"ವು ತಲೆಯ ಮೇಲೆ ಬೆಂಕಿ ಹಾಕುವ ಪವಾಡದಂತೆ ನೀರಿನ ಗುಣವನ್ನು ಅವಲಂಬಿಸಿಕೊಂಡಿದೆ.

ಇಲ್ಲಿಯೂ ಗಮನಿಸಬೇಕಾದ ವಿಷಯವೇನೆಂದರೆ ಈ ದ್ರಾವಣವನ್ನು ಮುಳುಗಿಸುವ ಬಟ್ಟೆಯು ಹತ್ತಿಯದಾದರೆ ಉತ್ತಮ.

## ಲೈಡನ್ ಫ್ರಾಸ್‌ನ ಪರಿಣಾಮ

ಬೆಂಕಿಯ ಹಿಂದಿನ "ಪವಾಡ"ಗಳು ಈ ಪರಿಣಾಮದ ಪ್ರಯೋಜನವನ್ನು ಪಡೆಯುತ್ತವೆ. ಭೌತ ಶಾಸ್ತ್ರದ ಈ ಪರಿಣಾಮವನ್ನು ಗಮನಿಸುವುದು ಅಗತ್ಯ.

ತೇವಾಂಶವಿರುವ ಅಂಗವು ಶಾಖದ ಮೇಲ್ಮೈಯನ್ನು ಸ್ಪರ್ಶಿಸಿದಾಗ ಅಂಗದಲ್ಲಿರುವ ನೀರು ಆವಿಯಾಗಿ ಈ ಎರಡು ಮೇಲ್ಮೈಗಳ ಮಧ್ಯ ಶಾಖ ನಿರೋಧಕ ಪದರವಾಗಿ ಕಾರ್ಯವಹಿಸುತ್ತದೆ. ಇದೇ ಪರಿಣಾಮವನ್ನು ಉಪಯೋಗಿಸಿ ಕೆಂಡದ ಮೇಲೆ ನಡೆಯುವುದು. "ಕುದಿಯುವ" ಎಣ್ಣೆಯಿಂದ ವಡೆಗಳನ್ನು ತೆಗೆಯುವುದು. ಇತ್ಯಾದಿ.

ಇಲ್ಲಿ ಗಮನಿಸಬೇಕಾದ ಮುಖ್ಯವಾದ ಅಂಶವೇನೆಂದರೆ ಈ ಲೈಡನ್ ಫ್ರಾಸ್ಟ್‌ನ ಪರಿಣಾಮದ ಶಾಖ ನಿರೋಧಕ ಪದರವು ಕೆಲವು ಸೆಕೆಂಡುಗಳ ಕಾಲ ಮಾತ್ರ ಅಸ್ತಿತ್ವದಲ್ಲಿರುತ್ತದೆ. ಆ ಬಳಿಕ. ಬೆಂಕಿ ಸುಡಲು ಆರಂಭವಾಗುವುದು. ಇದಕ್ಕಾಗಿಯೇ ಕೊಳ್ಳಿ ಹಚ್ಚಿಸಿಕೊಳ್ಳುವವರು ಕೊಳ್ಳಿಯನ್ನು ಚಲಿಸುತ್ತಿರುವುದು. ಕೆಂಡಗಳ ಮೇಲೆ ನಡೆಯುವವರು ವೇಗವಾಗಿ ನಡೆಯುವುದು. ಕರ್ಪೂರಾರತಿ ಮಾಡುವವರು ಉರಿಯುವ ಕರ್ಪೂರವನ್ನು ಕೈಯಿಂದ ಕೈಗೆ ವರ್ಗಾಯಿಸುವುದು.

# "ಶೂನ್ಯ"ದಿಂದ ವಸ್ತುಗಳನ್ನು ಸೃಷ್ಟಿಸುವುದು

"ಶೂನ್ಯದಿಂದ ವಸ್ತುಗಳನ್ನು ಸೃಷ್ಟಿಸುವುದು ಮನುಷ್ಯನನ್ನು ಬೆರಗುಗೊಳಿಸುವ ಕ್ರಿಯೆಗಳಲ್ಲೊಂದು. ಕೈ ಆಡಿಸಿ, ಗಾಳಿಯಿಂದ ವಿಭೂತಿ, ವಾಚು, ಉಂಗುರ, ಚೈನುಗಳನ್ನೋ, ಧೋತ್ರಕ್ಕೆ ಬೆಂಕಿ ಕೊಡು "ಶನಿ" ದೇವರುಗಳು, ನಾಲಿಗೆಯಿಲ್ಲದ ಗಂಟೆಗಳಿಂದ ಸ್ವರ ಹೊರಡಿಸುವವರು ಎಲ್ಲರೂ ಉಪಯೋಗಿಸುವ ತತ್ವವೊಂದೇ ಕಣ್ಣಿಗೆ ಕಾಣದಂತೆ ವಸ್ತುಗಳನ್ನು ಒಂದು ಸ್ಥಳದಿಂದ ಮತ್ತೊಂದಕ್ಕೆ ವರ್ಗಾಯಿಸುವುದು

## ಶೂನ್ಯದಿಂದ ವಿಭೂತಿ ಸೃಷ್ಟಿ

ಬರಿಗೈಯನ್ನು ಕೆಳಮುಖವಾಗಿ ಹಿಡಿದುಕೊಂಡು, ಅದನ್ನು ಗಾಳಿಯಲ್ಲಾಡಿಸುತ್ತಾ ಕಡಿಮೆಯಾಗುತ್ತಿರುವ ತ್ರಿಜ್ಯದ ವೃತ್ತಗಳನ್ನು ರಚಿಸಲಾಗುವುದು. ಒಮ್ಮಿಂದೊಮ್ಮೆಲೇ ಕೈಯಲ್ಲಿ ಸುವಾಸನೆಯುಳ್ಳ ಬೂದಿಯ ರಾಶಿಯೇ ಸೃಷ್ಟಿಯಾಗುವುದು. ವೇದಿಕೆಯಲ್ಲಿ ಇಳಿದು ಬಂದು, ಇದ್ದವರೆಲ್ಲರಿಗೂ ಹಂಚಿದರೂ ಮುಗಿಯದಂತಹ ವಿಭೂತಿಯ ಪ್ರಮಾಣ! ಕೊನೆಗೆ, ಎಲ್ಲರಿಗೂ ವಿಭೂತಿ ಹಂಚಿದ ಬಳಿಕ ಮತ್ತೆ ವೇದಿಕೆಯನ್ನೇರಿ ಎರಡು ಕೈಗಳನ್ನು



ಉಜ್ಜಿದಾಗ ಮತ್ತೂ ಸುರಿಯುವ ವಿಭೂತಿಯ ಮಳೆ! ಕೊನೆಗೆ ಕೈಗಳ ಕೆಳಗೆ ವಿಭೂತಿಯ ರಾಶಿಯೇ ನಿರ್ಮಿತವಾಗುವುದು!

ಶೂನ್ಯದಿಂದ ವಿಭೂತಿ ಸೃಷ್ಟಿ ಹೇಗೆ?. ಮುಖ್ಯವಾಗಿ ಈ ಪ್ರಯೋಗವು ವಸ್ತುವಿನ ಸಾಂದ್ರತೆ ಹಾಗೂ ಮನುಷ್ಯನ ತರ್ಕದ ಮೇಲೆ ಹೊಂದಿರುತ್ತದೆ. ಬೆರಳುಗಳ ಮಧ್ಯೆ ವಿಭೂತಿಯ ಚಿಕ್ಕ ಉಂಡೆಗಳನ್ನು ಹಿಡಿಯಲಾಗುತ್ತದೆ. ಗಾಳಿಯಲ್ಲಿ ಕೈಯಲ್ಲಾಡಿಸಿಕೊಂಡಿರುವಾಗ ಕಣ್ಣಿಗೆ ಕಾಣಿಸದ ಇವುಗಳನ್ನು ಪುಡಿ ಮಾಡಿದಾಗ, ಬೂದಿಯ ಕಣಗಳ ಮಧ್ಯೆ ಗಾಳಿ ಸೇರಿ, ವಸ್ತುವಿನ ಪ್ರಮಾಣವು ಹೆಚ್ಚಾದಂತೆ ತೋರುವುದು. ಪ್ರೇಕ್ಷಕರೆಲ್ಲರೂ ಕುತೂಹಲದಿಂದ ಗಾಳಿಯಲ್ಲಿ ಅಲ್ಲಾಡಿಸುತ್ತಿರುವ ಕೈಯನ್ನು ಗಮನಿಸುತ್ತಿರುವಾಗ ಜೇಬಿಗೆ ಇಳಿದ ಎಡಗೈ. ಅಲ್ಲಿಂದ ವಿಭೂತಿಯ ದೊಡ್ಡದಾಗ ಉಂಡೆಯನ್ನು ತೆಗೆದಾಗ ಯಾರ ಗಮನಕ್ಕೂ ಬರುವುದಿಲ್ಲ. ಸ್ವಲ್ಪ ಸಮಯ ಎರಡೂ ಕೈಯಿಂದ ವಿಭೂತಿ ಹಂಚಿ, ಇರುವ ಉಂಡೆ ಮುಗಿದಾಗ ಮತ್ತೆ ಜೇಬಿಗೆ ಕೈ ಹಾಕಬಹುದು!

ಶೂನ್ಯದಿಂದ ವಿಭೂತಿ ಸೃಷ್ಟಿ ಮಾಡುವವರು ಇಂತಹ ಚಿಕ್ಕ ಪುಟ್ಟ ಉಂಡೆಗಳನ್ನು ಅಲ್ಲಲ್ಲಿರಿಸಿಕೊಂಡಿರುತ್ತಾರೆ. ಅವುಗಳನ್ನು ಕೈಗೆ ವರ್ಗಾಯಿಸಿಕೊಂಡು ಹಂಚುವಾಗ ಇವರ ಭಕ್ತರು ಇದನ್ನು ಪ್ರಸಾದವೆಂದು ತಿಳಿದು ಭಕ್ತಿಯಿಂದ ಸ್ವೀಕರಿಸುತ್ತಾರೆ.

ಈ ವಿಭೂತಿಯನ್ನು ಹಂಚಲು ಇನ್ನೂ ಹಲವಾರು ವಿಧಾನಗಳಿವೆ. ಕಂಕುಳಲ್ಲಿ ವಿಭೂತಿ ತುಂಬಿದ ಚೀಲವನ್ನಿರಿಸುವುದು. ವಿಭೂತಿ ತುಂಬಿದ ಪ್ಲಾಸ್ಟಿಕ್‌ನ ಬೆರಳನ್ನು ಉಪಯೋಗಿಸುವುದು. ಚೊಂಬಿನೊಳಗೆ ಒದ್ದೆಮಾಡಿ ಒಣಗಿರಿಸಿದ ಸಂಪೀಡೀತ (Compressed) ವಿಭೂತಿಯನ್ನು ಕೈಹಾಕಿ ಹೊರತೆಗೆಯುವುದು ಇತ್ಯಾದಿ.

ವಿಭೂತಿಯ ಉಂಡೆಗಳನ್ನು ತಯಾರಿಸಲು ಬೂದಿಗೆ ಗಂಜಿ ನೀರು ಬೆರೆಸಿ, ಸ್ವಲ್ಪ ಪರಿಮಳ ದ್ರವ್ಯವನ್ನು ಸೇರಿಸಿ. ಚಿಕ್ಕ – ಚಿಕ್ಕ ಉಂಡೆಗಳನ್ನು ಮಾಡಿ ಬಿಸಿಲಿನಲ್ಲಿ ಒಣಗಿಸಬೇಕು. ವಿವಿಧ ಗಾತ್ರಗಳ ಈ ಉಂಡೆಗಳನ್ನು ಮಾಡಿ ಬಿಸಿಲಿನಲ್ಲಿ ಒಣಗಿಸಬೇಕು. ವಿವಿಧ ಗಾತ್ರಗಳ ಈ ಉಂಡೆಗಳನ್ನು ಜೇಬಿನೊಳಗಿರಿಸಿಕೊಂಡಲ್ಲಿ, ಹಂಚಬೇಕಾಗಿದ್ದ ವ್ಯಕ್ತಿಗಳ ಸಂಖ್ಯೆಯನ್ನು ಆಧರಿಸಿ ಬೇಕಾದ ಗಾತ್ರವನ್ನು ತೆಗೆದು ಪುಡಿ ಮಾಡಿ ಹಂಚಬಹುದು.

## "ಶೂನ್ಯ"ದಿಂದ ಪುಟ್ಟ ವಸ್ತುಗಳ ಸೃಷ್ಟಿ

ಗಾಳಿಯಲ್ಲಿ ಕೈಯಾಡಿಸುವಾಗ ಕೈಯಲ್ಲಿ ಚಿಕ್ಕ ಪುಟ್ಟ ವಸ್ತುಗಳು ಸೃಷ್ಟಿಯಾಗುತ್ತವೆ. ಅವುಗಳನ್ನು ಪ್ರೇಕ್ಷಕರಿಗೆ ಹಂಚುವುದು.

ಶೂನ್ಯದಿಂದ ವಸ್ತುಗಳನ್ನು ಸೃಷ್ಟಿಸುವುದು ಹೇಗೆ? ಇದನ್ನು ಮಾಡುವಾಗ ಗಮನಿಸಬೇಕಾದ ಮುಖ್ಯವಾದ ತತ್ವವೇನೆಂದರೆ ಕೈಯ ದೊಡ್ಡ ಚಲನೆ. ಬೆರಳುಗಳ ಚಿಕ್ಕ ಚಲನೆಯನ್ನು ಅಡಗಿಸುವುದು. ಕೈಚಳಕ ಇಲ್ಲವೆ ಪಾಮಿಂಗ್ (Palming) ಎಂಬುದು ಎಲ್ಲಾ ಜಾದೂಗಾರರಿಗೂ ತಿಳಿದ ತಂತ್ರ. ಇದೇ ತತ್ವದ ಉಪಯೋಗದಿಂದ ಜೇಬಿನೊಳಗೊ. ತೋಳಿನ ಒಳಗೊ ಯಾ ಗಡ್ಡದ ಹಿಂದೆ ಯಾ ಕರಡಿ ರೋಮಗಳಂತಿರುವ ಕೂದಲಿನ ಹಿಂದೆ ಅಡಗಿಸಿದ ವಾಚು. ಉಂಗುರ. ಚೈನು ಯಾ ಇಂತಹದೇ ಯಾವುದಾದರೂ ಚಿಕ್ಕ ವಸ್ತುವನ್ನು ತೆಗೆದು ಅದನ್ನು ಶೂನ್ಯದಿಂದ ಸೃಷ್ಟಿಸಿದ್ದೇವೆನ್ನುವುದೂ ಈ "ಪವಾಡ"ವನ್ನು ನಡೆಸಲು ಉದ್ದ ತೋಳಿನ ಅಂಗಿ ಇದ್ದರೆ ಉತ್ತಮ. ಅಂಗಿಯ ತೋಳಿನೊಳಗೆ ಕೈಗೆ ಸಿಗುವಂತಹ ಸ್ಥಳದಲ್ಲಿ ಚಿಕ್ಕ ಪುಟ್ಟ ವಸ್ತುಗಳನ್ನು ಪೊಲಿದಿಡಬೇಕು. ಗಾಳಿಯಲ್ಲಿ ಕೈಯಾಡಿಸುತ್ತಾ ಇವುಗಳನ್ನು ಕೊಟ್ಟರೆ. ಶೂನ್ಯದಿಂದ ಇವುಗಳನ್ನು ಸೃಷ್ಟಿ ಮಾಡಿಸಿದ ಭ್ರಮೆಯುಂಟು ಮಾಡಬಹುದು.

## ಸ್ವರ್ಗ ಲೋಕದಿಂದ ಬಂದ ವಿಶೇಷ ಗಂಟೆ

ಮದ್ರಾಸಿನ ಖ್ಯಾತ ಸ್ವಾಮಿಯೋರ್ವನ ಬಳಿ ಒಂದು ವಿಶೇಷವಾದ ಗಂಟೆ ಇತ್ತು. ಇದು ನೇರವಾಗಿ ಸ್ವರ್ಗ ಲೋಕದಿಂದಿಳಿದು ಬಂದ ವಿಶೇಷ ಗಂಟೆ. ಇದನ್ನು ಆತ ಆಡಿಸಿದಲ್ಲಿ ಮಾತ್ರ ಶಬ್ದ ಹೊರಡುತ್ತಿತ್ತು! ಭಕ್ತರು ಅಲ್ಲಾಡಿಸಿದಾಗ ಶಬ್ಧ ಬರುತ್ತಿರಲಿಲ್ಲ! ಯಾಕೆಂದರೆ. ಅದು ನಾಲಿಗೆಯಿಲ್ಲದ್ದು!

ಇದನ್ನು ನಡೆಸುವುದು ಹೇಗೆ? ಎಡಗೈ ತೋಳಿನೊಳಗೆ ಒಂದು ಚಿಕ್ಕ ಗಂಟೆಗೆ ಇಲಾಸ್ಟಿಕ್ ಕಟ್ಟಿ ತೂಗಿಸಿಡಲಾಗುತ್ತದೆ. ಇನ್ನೊಂದು ನಾಲಿಗೆಯಿಲ್ಲದ ಗಂಟೆಯನ್ನು ತೋರಿಸಲಾಗುವುದು. ಇದನ್ನು ಯಾರು ಆಡಿಸಿದರೂ ಶಬ್ಧ ಹೊರಡುವುದಿಲ್ಲ! ಆದರೆ. ಗಂಟೆ ಕಟ್ಟಿಸಿಕೊಂಡ ಕೈಯಿಂದ ಅದನ್ನು ಆಡಿಸಿದಾಗ ಶಬ್ಧ ಹೊರಡುವುದು! ನೋಡುವವರಿಗೆ ಉಂಟಾಗುವ ಭ್ರಮೆಯೇನೆಂದರೆ ಪವಾಡ ನಡೆಯುತ್ತಿದೆಯೆಂದು.

## ಶನಿಮಹಾತ್ಮೆಯ ಪವಾಡ

ಮನೆಗೆ ಬಂದ ಸಾಧು. ಆಲೋಚನೆ ಮಾಡಿದ ಬಳಿಕ ಗೃಹಿಣಿಗೆ ತಿಳಿಸುತ್ತಾನೆ – ನಿಮ್ಮ ಮನೆಗೆ ಶನಿಕಾಟವಿದೆ. ಅದೇ ನಿಮಗೆ ಬಹಳ ತೊಂದರೆಗಳಿವೆ. ಇದನ್ನು ಪರೀಕ್ಷಿಸಲು ಬಿಳಿ ಪಂಚೆ ತರಲು ಹೇಳುತ್ತಾನೆ. ಬಿಳಿ ಪಂಚೆಯನ್ನು ಕೈಯಲ್ಲಿ ಹಿಡಿದು ಬೆಂಕಿ ಕೊಡಲಾಗುತ್ತದೆ. ಕೆಲವೇ ಸೆಕೆಂಡುಗಳ ಕಾಲ ಬೆಂಕಿ ಉರಿದ ಬಳಿಕ ಕೈ ತೆಗೆಯುತ್ತಾನೆ. ಪಂಚೆಯನ್ನು ಗಮನಿಸಿದರೆ ಯಾವುದೇ ಸುಟ್ಟ ಗುರುತಿಲ್ಲ! ಒಟ್ಟಿನಲ್ಲಿ ಮನೆಯವರಿಗೆ ಶನಿ ದೋಶವಿದೆ! ಅದೇ ಕಾರಣ ಬೆಂಕಿ ಸುಡುವುದಿಲ್ಲವೆಂಬ ವಿವರಣೆ! ಹಿಂದೆ ನಳ ಮಹಾರಾಜನಿಗೆ ಶನಿಕಾಟ ಹಿಡಿದಾಗ ಆವನಿಗೆ ಬೆಂಕಿ ತಗಲಿಲ್ಲವಂತೆ!

ಶನಿ ಕಾಟಕ್ಕೆ ಹೆದರಿದ ಮನೆಯಾಕೆಯಿಂದ ಹಣ ಕಿತ್ತು ಪೂಜೆ ಮಾಡಿದ ಬಳಿಕ ಶನಿಕಾಟದ ನಿವಾರಣೆ! ಈ ಶನಿ ಕಾಟದ ಪ್ರಯೋಗವು ಕೈ ಚಳಕದ ಮೇಲೆ ಅವಲಂಬಿತವಾಗಿದೆ. ಬೆಂಕಿ ಕೊಡುವ ಧೋತ್ರ ಯಾ ಪಂಚೆಯು ಬಿಳಿ ಬಣ್ಣದಾಗಿರುತ್ತದೆ. ಬೆಂಕಿ ಕೊಡುವಾತನು ತನ್ನ ಕೈಯಲ್ಲಿ ಚಿಕ್ಕ ಬಿಳಿ ಬಟ್ಟೆಯ ತುಂಡನ್ನು ಹಿಡಿದಿರುತ್ತಾನೆ ಅದನ್ನು ಪಂಚೆಯ ಮೇಲಿರಿಸಿ. ಕೈಚಳಕದಿಂದ ಬೆಂಕಿ ಕೊಡುವುದು ಅದಕ್ಕೆ! ಬಳಿಕ, ಆ ತುಂಡನ್ನು ಅಡಗಿಸಿಡುತ್ತಾನೆ! ಈ ಮೂಲಕ ಮನೆಯಾಕೆಯನ್ನು ಶನಿಕಾಟದ ವಿಷಯ ನಂಬಿಸಿ, ಹಣ ಕೀಳುತ್ತಾನೆ.

## ಇತರ ಕೈಚಳಕಗಳು

ಇದೇ ರೀತಿಯಲ್ಲಿ 5 ಪೈಸೆ ನಾಣ್ಯವನ್ನು 10 ಪೈಸೆ ನಾಣ್ಯವನ್ನಾಗಿ ಮಾಡುವುದು, ಚಿಕ್ಕ ಪುಟ್ಟ ವಸ್ತುಗಳನ್ನು ಮಾಯ ಮಾಡುವುದು ಇತ್ಯಾದಿ "ಪವಾಡ"ಗಳನ್ನು ಮಾಡಿ ತೋರಿಸಬಹುದು.

ಪಾಮಿಂಗ್ ಮಾಡುವವರನ್ನು ಗಮನಿಸಿದರೆ ಅವರು ಯಾವಾಗಲೂ ಕೈಯನ್ನು ಗಾಳಿಯಲ್ಲಿ ಅಲ್ಲಾಡಿಸಿಯೇ ವಸ್ತುಗಳನ್ನು ತೆಗೆಯುವುದು ಯಾ ಮಾಯ ಮಾಡುವುದನ್ನು ಗಮನಿಸಬಹುದು. ಇಂತಹ ವ್ಯಕ್ತಿಗಳ ಮೋಸವನ್ನು ಬಯಲಿಗೆಳೆಯುವುದು ಬಹಳ ಸುಲಭ. ಗಾಳಿಯಲ್ಲಿ ಆಡಿಸುವ ಕೈಗೆ ಒಂದು ಬಲವಾದ ಹೊಡೆತ ಕೊಟ್ಟರೆ, ಕೈಯ ಬೆರಳುಗಳ ಮಧ್ಯೆ ಇರುವ ವಸ್ತು ಕೆಳಗೆ ಬೀಳುತ್ತದೆ.

ಶೂನ್ಯದಿಂದ ವಸ್ತುಗಳನ್ನು ತೆಗೆಯುವ ಪವಾಡ ಪುರುಷರ ವೈಶಿಷ್ಟ್ಯಗಳನ್ನು ಈ ಕೆಳಗೆ ಪಟ್ಟಿಮಾಡಿದ್ದೇನೆ. ಶೂನ್ಯಕ್ಕೆ ವಸ್ತುಗಳನ್ನು ಮಾಯ ಮಾಡಿಸಿ ಬಿಡುವವರಿಗೂ ಇವೇ ತತ್ವಗಳನ್ನು ಅನ್ವಯಿಸಬಹುದು.

1. ಇವರು ಕೊಡುವ ವಸ್ತುಗಳು ಕೈ ಮುಷ್ಟಿಯೊಳಗೆ ಹಿಡಿಸುವಂತಹವು.

2. ವಸ್ತುಗಳನ್ನು "ಪ್ರತ್ಯಕ್ಷ" ಮಾಡುವ ಮೊದಲು ಗಾಳಿಯಲ್ಲಿ ಕೈಯಾಡಿಸುತ್ತಿರುತ್ತಾರೆ.

3. ಕೊಡುವ ವಸ್ತುಗಳ ಮೌಲ್ಯ ಭಕ್ತರ ಆರ್ಥಿಕ ಮಟ್ಟ, ಸಾಮಾಜಿಕ ಸ್ಥಾನಮಾನಗಳನ್ನು ಹೊಂದಿರುತ್ತದೆ. ಉದಾ: ಶ್ರೀಮಂತ ಭಕ್ತವರ್ಗಕ್ಕೆ ವಾಚು, ಚೈನು, ಉಂಗುರ ಇತ್ಯಾದಿ. ಜನ ಸಾಮಾನ್ಯರಿಗೆ ಬರೇ ಬೂದಿ, ರುದ್ರಾಕ್ಷಿ ಮಣಿ ಇತ್ಯಾದಿ.

4. ಹೆಚ್ಚಿನವರು ಉದ್ದ ತೋಳಿನ ಶರ್ಟು ಯಾ ಇತರ ಮೇಲಂಗಿಯನ್ನು ಧರಿಸಿರುತ್ತಾರೆ ಯಾ ಶಾಲು ಹೊದ್ದುಕೊಂಡಿರುತ್ತಾರೆ.

# ರಾಸಾಯನಿಕಗಳನ್ನು ಉಪಯೋಗಿಸಿ "ಪವಾಡ"ಗಳು

ಸಾಮಾನ್ಯವಾಗಿ ಲಭ್ಯವಿರುವಂತಹ ರಾಸಾಯನಿಕ ವಸ್ತುಗಳನ್ನು ಉಪಯೋಗಿಸಿ "ಪವಾಡ"ಗಳನ್ನು ನಡೆಸಿ ಜನ ಸಾಮಾನ್ಯರನ್ನು ಮೋಸಗೊಳಿಸುವವರಿದ್ದಾರೆ. ಇಂತಹ ಕೆಲವು ಪ್ರಯೋಗಗಳನ್ನು ನೋಡೋಣ.

## ತಪಶ್ಶಕ್ತಿಯಿಂದ ಯಜ್ಞಕುಂಡದಲ್ಲಿ ಬೆಂಕಿ

ಯಜ್ಞಕುಂಡವನ್ನು ರಚಿಸಲಾಗಿದೆ. ಕಟ್ಟಿಗೆಯ ರಾಶಿಯೂ ಇದೆ. ಗುಣು - ಗುಣು ಮಂತ್ರ ಹೇಳುತ್ತಾ, ಕಟ್ಟಿಗೆಗೆ ತುಪ್ಪ ಸುರಿಯಲಾಗುತ್ತದೆ. ಈಗ ಬೆಂಕಿ ಬೇಕಲ್ಲವೆ? ಪವಾಡ ಪುರುಷ ತನ್ನ ದೃಷ್ಟಿಯನ್ನು ಕುಂಡದ ಮೇಲೆ ಹರಿಸಿ, ದುರುಗುಟ್ಟಿಕೊಂಡು ನೋಡುತ್ತಾನೆ. ಭಗ್ಗನೆ ಬೆಂಕಿ ಉರಿದು, ಯಜ್ಞಕುಂಡ ಬೆಳಗುತ್ತದೆ. ವೀಕ್ಷಕರು ಈತನ ಪಾದಕ್ಕೆರಗುತ್ತಾರೆ. ಬರೇ ದೃಷ್ಟಿಯಿಂದಲೇ ಬೆಂಕಿ ಉರಿಸಬಲ್ಲ ಮಹಾ ಪುರುಷನೊಡನೆ ಒಳ್ಳೆಯ ಸಂಬಂಧವನ್ನಿಟ್ಟುಕೊಳ್ಳುವುದು ಉತ್ತಮವೆಂದು ಆತನಿಗೆ ದಕ್ಷಿಣೆ ಸಲ್ಲಿಸಿ, ಪಾದಕ್ಕೆರಗಿದರು. ಈ ಘಟನೆಯು ನಡೆದದ್ದು ಮೂಲೆಯ ಹಳ್ಳಿಯಲಲ್ಲ - ದಿಲ್ಲಿಯಲ್ಲಿ! ದಕ್ಷಿಣೆ ಕೊಟ್ಟು ಪಾದಕ್ಕೆರಗಿದವರಲ್ಲಿ ಮಂತ್ರಿಗಳು, ಉನ್ನತಾಧಿಕಾರಿಗಳು, ವಿಜ್ಞಾನಿಗಳಿದ್ದರು.

ಇದೇ ಪ್ರಯೋಗವನ್ನು ನಾವು ನಡೆಸೋಣ. ಚಿಕ್ಕ ತಟ್ಟೆಯೊಂದರಲ್ಲಿ ಪೇಪರ್ ಚೂರುಗಳು. ಅದಕ್ಕೆ ತುಪ್ಪ ಸುರಿಯುವ ಮೊದಲು ಅದರ ರುಚಿ ನೋಡಲು ಸಭಿಕರಿಗೆ ಆಹ್ವಾನ. ತಿಂದು ಬಾಯಿ ಚಪ್ಪರಿಸಿ, ಇದು ಜೇನು ತುಪ್ಪವೆಂದು ಪ್ರಮಾಣೀಕರಿಸಿದ ಬಳಿಕವೇ ಅದನ್ನು ಯಜ್ಞಕುಂಡಕ್ಕೆ ಸೇರಿಸುವುದು. ಬಳಿಕ, ಮನಸ್ಸಿನ ಶಕ್ತಿಯನ್ನು ಕಣ್ಣುಗಳ ಮೂಲಕ ಹರಿಸಿದರಾಯಿತು! ಯಜ್ಞಕುಂಡದಲ್ಲಿ ಭಗ್ಗನೆ ಬೆಂಕಿ.

ವಾಸ್ತವವಾಗಿ ಇಲ್ಲಿ ನಡೆಯುವುದೇನು? ಯಜ್ಞಕುಂಡದ ಕಟ್ಟಿಗೆ ರಾಶಿಯಲ್ಲಿ ಪೊಟಾಸಿಯಂ ಪರಮ್ಯಾಂಗನೇಟನ್ನು ಇರಿಸಲಾಗುವುದು. ಸಿಹಿ ರುಚಿಯ ತುಪ್ಪವು ನಿಜವಾಗಿಯೂ ಗ್ಲಿಸರೀನ್. ಪರಮ್ಯಾಂಗನೇಟ್‌ಗೆ ಒಂದೆರಡು ತೊಟ್ಟು ಗ್ಲಿಸರೀನ್ ಸೇರಿಸಿದಾಗ ರಾಸಾಯನಿಕ ಕ್ರಿಯೆಯಿಂದ ಶಾಖೋತ್ಪನ್ನವಾಗಿ ಬೆಂಕಿ ಉರಿಯುವುದು. ಆಮ್ಲಜನಕದ ಆಕರವಾದ ಪರ್‌ಮ್ಯಾಂಗನೇಟ್ ಜಲನಕ್ರಿಯೆಗೆ ಮತ್ತೂ ಪ್ರೋತ್ಸಾಹವೀಯುವುದು. ಒಟ್ಟಿನಲ್ಲಿ ಎರಡು ನಿರಪಾಯಕಾರಿಯಾದ ರಾಸಾಯನಿಕಗಳ ಮಿಲನದಿಂದ ಸ್ಫೋಟಕ ಪರಿಸ್ಥಿತಿ, ಸುಲಭವಾಗಿ ಉರಿಯುವ ಬೆಂಕಿ.

## ಬಣ್ಣ ಬದಲಾಯಿಸುವ ಅರಿಶಿನ

ಸ್ವಾಮಿಗೆ ಅಡ್ಡ ಬಿದ್ದ ಭಕ್ತನಿಗೆ ಕಾರ್ಯಸಿದ್ಧಿಯಾಗುವುದೇ ಎಂದು ಪರಿಶೀಲಿಸಲು ಅರಿಶಿನದ ಚಿಟಿಕೆಯನ್ನು ನೀಡಲಾಗುತ್ತದೆ. ಅದನ್ನು ಮುಷ್ಟಿಯಲ್ಲಿ ಬಿಗಿಯಾಗಿ ಹಿಡೆದು, ಧ್ಯಾನ ಮಾಡುವ ಸೂಚನೆ ಕೊಡಲಾಗುತ್ತದೆ. ಕೆಲವೇ ನಿಮಿಷಗಳಲ್ಲಿ ಅರಿಶಿನ ಕೆಂಪು ಬಣ್ಣ ತಳೆಯುವುದು! ಅಪಾಯಕಾರಿಯಾದ ಪರಿಸ್ಥಿತಿ ಕಾರ್ಯಸಿದ್ಧಿಯಾಗಲಿಕ್ಕಿಲ್ಲವೆಂಬ ಎಚ್ಚರಿಕೆ ವಿಘ್ನ ಪರಿಹಾರಕ್ಕಾಗಿ ಮತ್ತೆ ಪೂಜೆ ಪುರಸ್ಕಾರಗಳನ್ನು ನಡೆಸಲಾಗುತ್ತದೆ. ಮತ್ತೊಮ್ಮೆ ಭಕ್ತನ ಕೈಗೆ ಅರಿಶಿನ ನೀಡಲಾಗುವುದು. ಭಕ್ತಿಯಿಂದ ಇದನ್ನು ಹಿಡಿದು ನಿಂತ ಭಕ್ತನಿಗೆ ಎದೆಯೆಲ್ಲಾ ಡಬ – ಡಬ. ಆದರೆ, ಈ ಬಾರಿ ಅರಿಶಿನ ಬಣ್ಣ ಬದಲಾಯಿಸುವುದಿಲ್ಲ. ಭಕ್ತಾ, ಹೋಗು, ನಿನ್ನ ಕೆಲಸವಾಗುವುದೆಂಬ ಆಶ್ವಾಸನೆ.

ಕಾರ್ಯ ಸಿದ್ಧಿಯಾಗುವುದೇ ಎಂಬ ಪರೀಕ್ಷೆ ನಡೆಸುವುದು ಹೇಗೆ? ಮೊದಲನೆಯ ಬಾರಿಗೆ ಕೊಟ್ಟ ಅರಿಶಿನದಲ್ಲಿ ಕ್ಷಾರದ ಮಿಶ್ರಣವಿದೆ. ಕೈಯ ತೇವಕ್ಕೆ ಇದು ಕರಗಿ, ಎರಡೂ ಮಿಶ್ರಣವಾಗುತ್ತದೆ. ಸೂಚಕವಾಗಿರುವ ಅರಿಶಿನ ಕ್ಷಾರದ ದ್ರಾವಣಗಳಲ್ಲಿ ಕೆಂಪು ಬಣ್ಣ ಹೊಂದುತ್ತದೆ. ಅದೇ, ಎರಡನೆಯ ಬಾರಿ ಕೊಟ್ಟ ಅರಿಶಿನ ಶುದ್ಧವಾದದ್ದು. ಇದು ಬಣ್ಣ ಬದಲಾಯಿಸುವುದಿಲ್ಲ.

ಕಡಿಮೆ ತಿಳುವಳಿಕೆಯಿರುವವರನ್ನು ಮೋಸಮಾಡುವುದು ಸುಲಭವಲ್ಲವೆ? ನಿಮ್ಮ ಬಿ.ಎ., ಎಂ.ಎ., ಎಂ.ಎಸ್ಸಿ., ಕಲಿತವರೇನೂ ಇಂತಹ ಮೋಸಗಳಿಗೆ ಬಲಿ ಬೀಳುವುದೇನೂ ಕಡಿಮೆಯಿಲ್ಲ. ಈ ಪ್ರಯೋಗಕ್ಕೆ ಅರಿಶಿನಕ್ಕೆ ಕ್ಷಾರ ಹಾಕಲು ಧೋಬಿ ಖಾರ (washing soda), ಸಾಬೂನು, ಸುಣ್ಣದ ಪುಡಿಯನ್ನು ಉಪಯೋಗಿಸಬಹುದು. ಇದರಲ್ಲಿ ಧೋಬಿ ಖಾರವು ನೀರನ್ನು ಹೀರಿಕೊಳ್ಳುವುದಿಲ್ಲವಾದ ಕಾರಣ ಅದುವೇ ಉತ್ತಮ.

## ಭಾನಾಮತಿಯ ಬೆಂಕಿ

ಭಾನಾಮತಿ ನಡೆದಾಗ ಬಟ್ಟೆಗಳಿಗೆ, ಮನೆಗೆ ಆಕಸ್ಮಾತ್ತಾಗಿ ಬೆಂಕಿ ತಗಲುವುದಂತೆ. ಹತ್ತಿರ ಯಾರೂ ಇಲ್ಲವಾದರೂ ತಗಲುವ ಈ ಬೆಂಕಿಗೆ ಯಾವುದೋ ಅತಿ ಮಾನುಷ ಶಕ್ತಿ ಕಾರಣವಿರಬೇಕೆಂದು ಭಯ! ಆ ಬೆಂಕಿ ಹತ್ತಿಕೊಳ್ಳುವುದು ಹೇಗೆ? ಬಿಳಿ ರಂಜಕವನ್ನು ಒದ್ದೆ ಸೆಗಣಿಯಲ್ಲಿಟ್ಟು ಮರಕ್ಕೆ ಯಾ ಬೆಂಕಿ ಸುಲಭವಾಗಿ ಹತ್ತಿಕೊಳ್ಳುವಲ್ಲಿಗೆ ತಗಲಿಸಲಾಗುತ್ತದೆ. ನೋಡುವವರಿಗೆ ಈ ಬೆಂಕಿ ವ್ಯಕ್ತಿಯೂ ಹತ್ತಿರವಿಲ್ಲದಾಗ ಹತ್ತಿಕೊಂಡದ್ದನ್ನು ಕಂಡು ಗಾಬರಿ!

(ಎಚ್ಚರಿಕೆ: ಇದನ್ನು ಪ್ರಯೋಗ ಮೂಲಕ ತೋರಿಸಲು, ಬಿಳಿ ರಂಜಕ, ಇದು ವಿಷ ಮಾತ್ರವಲ್ಲದೆ ಅಪಾಯಕಾರಿ ರಾಸಾಯನಿಕ ಕೂಡಾ. ಇದನ್ನು ಸರಿಯಾದ



ಅನುಭವವಿಲ್ಲದವರು ಉಪಯೋಗಿಸಕೂಡದು) ಕಾರ್ಬನ್ ಡೈ ಸಲ್ಫೈಡ್ ಅದರ ದ್ರಾವಣವನ್ನು ಸಿದ್ಧ ಮಾಡಲಾಗುತ್ತದೆ. ಇದನ್ನು ಬೆಂಕಿ ಹಿಡಿಯುವಂತಹ ವಸ್ತುವಿನ ಮೇಲೆ ಚೆಲ್ಲಿದಾಗ, ಕಾರ್ಬನ್ ಡೈಸಲ್ಫೈಡ್ ಆವಿಯಾಗಿ ರಂಜಕಕ್ಕೆ ಬೆಂಕಿ ಹಿಡಿಯುವುದು.

ಈ ಪ್ರಯೋಗದಿಂದ ಭಾನಾಮತಿ ಮಾಡುವವರು ಬೆಂಕಿ ಹೇಗೆ ಕೊಡುತ್ತಾರೆಂಬುದನ್ನು ತೋರಿಸಬಹುದು. ಜ್ವಲನೀಯ ವಸ್ತು ಯಾವುದೂ ಇಲ್ಲದೆ, ಬೆಂಕಿ ಹಿಡಿಯುವುದಿಲ್ಲವೆಂದು ತೋರಿಸಲು ಇದೊಂದು ವಿಧಾನ. ಆದರೆ, ಈಗಾಗಲೇ ತಿಳಿಸಿರುವಂತೆ ರಂಜಕವು ಅಪಾಯಕಾರಿಯಾದ ರಾಸಾಯನಿಕ. ಕಾರ್ಬನ್ ಡೈಸಲ್ಫೈಡ್ ಸುಲಭವಾಗಿ ಆವಿಯಾಗುವ ದ್ರವ. **ಇವೆರಡನ್ನೂ ಸರಿಯಾದ ಅನುಭವವಿಲ್ಲದವರು ಉಪಯೋಗಿಸಬಾರದು. ಸಾರ್ವಜನಿಕ ಪ್ರಯಾಣದ ವಾಹನಗಳಲ್ಲಿ ಸಾಗಿಸಬಾರದು.**

## ನಾಣ್ಯ / ಫೋಟೋದಿಂದ ವಿಭೂತಿ

ಬಾಬಾ ಓರ್ವರು ತಾವು ವಿಭೂತಿ ಕೊಡುವುದು ಮಾತ್ರವಲ್ಲದೆ, ತಮ್ಮ ಚಿತ್ರಗಳಿಂದಲೋ ವಿಭೂತಿ ಸುರಿಸುತ್ತಾರೆಂಬ ಪ್ರತೀತಿಯಿದೆ. ಇವರ ಫೋಟೋದಿಂದ ವಿಭೂತಿ ಉದುರುವ ಮನೆಗಳಂತೂ ಮಂದಿರಗಳೇ ಆಗಿಬಿಟ್ಟಿವೆ. ಇವುಗಳನ್ನು ಸರಿಯಾಗಿ ಪರೀಕ್ಷಿಸಲು ಅವಕಾಶ ಸಿಗುವುದಿಲ್ಲವಾದ ಕಾರಣ ನಾವು ಇದನ್ನು ಮಾಡಿತೋರಿಸುವುದು ಸೂಕ್ತ.

ವೀಕ್ಷಕರಿಂದ ಪಡೆದ ಅಲ್ಯೂಮಿನಿಯಂ ನಾಣ್ಯಗಳಿಗೆ (5, 10 ಯಾ 20 ಪೈಸೆಯದ್ದು) ಒಂದು ದ್ರವವನ್ನು ಹಚ್ಚಲಾಗುತ್ತದೆ. ಬಳಿಕ ನಾಣ್ಯವನ್ನು ನೀರಿನಲ್ಲಿ ಮುಳುಗಿಸಿ. ಒಣಗಿಸಿ ಅವರವರ ನಾಣ್ಯವನ್ನು ಹಿಂದಿರುಗಿಸಲಾಗುತ್ತದೆ. ಅವುಗಳನ್ನು ಕೈಯಲ್ಲಿ ಬಿಗಿಯಾಗಿ ಹಿಡಿದುಕೊಂಡಾಗ. ಬಿಸಿಯೇರುವ ಅನುಭವವಾಗುತ್ತದೆ. ಮುಷ್ಟಿ ತೆರೆದು ನೋಡಿದಾಗ ನಾಣ್ಯದಿಂದ ವಿಭೂತಿ ಹೊರಡುತ್ತಿರುತ್ತದೆ.

ನಾಣ್ಯದಿಂದ ವಿಭೂತಿ ಹೊರಡಿಸುವುದು ರಾಸಾಯನಿಕ ಉಪಯೋಗದಿಂದಾಗುವ "ಪವಾಡ" ನಾಣ್ಯಕ್ಕೆ ಮರ್ಕ್ಯುರಿಕ್ ಕ್ಲೋರೈಡ್‌ನ ದ್ರಾವಣ ಯಾ ಘನರೂಪದಲ್ಲೇ ಇರುವ ಯಾವುದಾದರೂ ಮರ್ಕ್ಯುರಿಯ ಲವಣವನ್ನು ಹಚ್ಚಿದಾಗ. ಅಲ್ಯುಮಿನಿಯಂ ವಾತಾವರಣದ ಆಮ್ಲಜನಕದೊಂದಿಗೆ ಪ್ರತಿಕ್ರಿಯಿಸಿ. ಅದರ ಆಕ್ಸೈಡ್ ಉತ್ಪತ್ತಿಯಾಗುತ್ತದೆ. ಈ ಆಕ್ಸೈಡ್‌ಗಳು ಲಘುವಾದ ಕಾರಣ ಚಿಕ್ಕ ನಾಣ್ಯವು ತನ್ನ ಗಾತ್ರದ ಹಲವಾರು ಪಟ್ಟು ಪ್ರಮಾಣದ ಆಕ್ಸೈಡನ್ನು ಉತ್ಪತ್ತಿ ಮಾಡಬಲ್ಲುದು.

ಫೋಟೋಗಳಿಂದ ವಿಭೂತಿ ಹೊರಡಿಸುವ ಇನ್ನೊಂದು ವಿಧಾನವಿದೆ. ಆದರೆ ಇದು ರಾಸಾಯನಿಕ ಕ್ರಿಯೆಯನ್ನು ಆಧರಿಸಿಲ್ಲ. ವಿಭೂತಿಯನ್ನು ನೀರಿನಲ್ಲಿ ಕಲಸಿ ಅದನ್ನು ಫೋಟೋದ ಗಾಜಿನ ಮೇಲೆ ಚಿಮುಕಿಸಿದರಾಯಿತು. ಆಬಳಿಕ ಅದರೆದುರು ಊದುಕಡ್ಡಿ ಯಾ ದೀಪ ಹಚ್ಚಿದರೆ. ಅದರ ಶಾಖಕ್ಕೆ ನೀರು ಆವಿಯಾಗಿ ಬೂದಿ ಉದುರುತ್ತಲಿರುತ್ತದೆ.

ಈ ಜಗತ್ತಿನಲ್ಲಿ ಶೂನ್ಯದಿಂದ ಯಾವುದನ್ನೂ ಸೃಷ್ಟಿ ಮಾಡಲು ಸಾಧ್ಯವಿಲ್ಲ. ವಸ್ತುಗಳು ರೂಪಾಂತರ. ಸ್ಥಳಾಂತರ ಹೊಂದುತ್ತವೆಯೇ ಹೊರತು. ಶೂನ್ಯದಿಂದ ಏನನ್ನೂ. ಸೃಷ್ಟಿಸಲು ಸಾಧ್ಯವಿಲ್ಲ. ಶೂನ್ಯಕ್ಕೆ ಯಾವುದನ್ನೂ ಕಳುಹಿಸಲು ಸಾಧ್ಯವಿಲ್ಲ.

ನಾಣ್ಯದಿಂದ ವಿಭೂತಿ ಬರಿಸುವಾಗ ನೆನಪಿಟ್ಟುಕೊಳ್ಳಬೇಕಾದ ವಿಷಯವೇನೆಂದರೆ ಮರ್ಕ್ಯುರಿಯ ಲವಣಗಳು ವಿಷಕಾರಿ. ತತ್ಕಾರಣ. ಅವುಗಳನ್ನು ಉಪಯೋಗಿಸುವಾಗ ಜಾಗ್ರತೆಯಿಂದಿರಬೇಕು. ನಾಣ್ಯಗಳನ್ನು ವೀಕ್ಷಕರ ಕೈಗೆ ಕೊಡುವ ಮೊದಲು ಅವನ್ನು ಸರಿಯಾಗಿ ತೊಳೆದು ಒಣಗಿಸಿಯೇ ಕೊಡಬೇಕು.

## ಬರೆದ ಸ್ಥಳದಲ್ಲಿ ಮಾತ್ರ ಸುಡುವ ಚಿಹ್ನೆ

ಸ್ವಾಮಿಯೋರ್ವರು ತಮ್ಮ ತಪಶ್ಶಕ್ತಿಯನ್ನು ತೋರಿಸಲು ಚಿಹ್ನೆಯನ್ನು ಒಂದು ಕಾಗದದ ಮೇಲೆ ಬರೆದು. ಧ್ಯಾನ ಮಾಡುತ್ತಿದ್ದರಂತೆ. ಬಳಿಕ. ಇದಕ್ಕೆ ಬೆಂಕಿ ಮುಟ್ಟಿಸಿದಾಗ ಇದನ್ನು ಬರೆದ ಸ್ಥಳಕ್ಕೆ ಬೆಂಕಿ ಹಚ್ಚಿದಾಗ. ಆ ಚಿಹ್ನೆ ಬರೆದ ಸ್ಥಳದಷ್ಟು ಸುಡುತ್ತಿತ್ತು! ಇದಕ್ಕೆ ತಮ್ಮ ತಪಶ್ಶಕ್ತಿ ಕಾರಣವೆಂಬ ವಿವರಣೆ.

ವೀಕ್ಷಕರೆದುರು ಒಂದು ದಪ್ಪ ಕಾಗದವನ್ನು ತೋರಿಸಲಾಗುತ್ತದೆ. ಆ ಕಾಗದ ಮೇಲೆ ದಪ್ಪಕ್ಷರದಲ್ಲಿ ಪೆನ್ಸಿಲ್‌ನಿಂದ ? ಚಿಹ್ನೆಯನ್ನು ಬರೆಯಲಾಗಿದೆ. ಸಿಗರೇಟು ಯಾ ಬೀಡಿ ಸೇದುವ ವೀಕ್ಷಕರಿಂದ ಅದಕ್ಕೆ ಬೆಂಕಿ ಮುಟ್ಟಿಸಲಾಗುತ್ತದೆ. ಆಗ. ಈ ಚಿಹ್ನೆಯಿರುವ ಸ್ಥಳ ಮಾತ್ರ ಚಟ - ಚಟನೆ ಉರಿದು. ಕಾಗದದ ಇತರ ಭಾಗ ಹಾಗೆಯೇ ಇರುತ್ತದೆ. ನಾವು ವಿಚಾರವಾದಿಗಳಾದ ಕಾರಣ. ನಮ್ಮ ಪ್ರಿಯ ಚಿಹ್ನೆ ಪ್ರಶ್ನಾರ್ಥಕ ಚಿಹ್ನೆ ಯಾಕೆಂದರೆ ನಾವು ಪ್ರಶ್ನಿಸದೆ ನಂಬುವುದಿಲ್ಲ ತಾನೆ?

ಈ ಶಕ್ತಿಯನ್ನು ತೋರಿಸುವುದು ಹೇಗೆ? ಒಂದು ದಪ್ಪದಾದ (ಲೆಡ್ಜರ್ ಪೇಪರ್) ಹಾಳೆಯ ಮೇಲೆ ಪೆನ್ಸಿಲ್‌ನಿಂದ? ಬರೆಯಬೇಕು. ಸುಮಾರು 1 ಸೆ.ಮಿ. ದಪ್ಪ ಅಕ್ಷರದಲ್ಲಿ ಇದನ್ನು ಬರಯಬೇಕು. ಆ ಬಳಿಕ ಒಂದು ಬ್ರಶ್‌ನಿಂದ ಈ ಚಿಹ್ನೆ ಬರೆದ ಸ್ಥಳಕ್ಕೆ ಪೊಟೆಸಿಯಂ ನೈಟ್ರೇಟ್ ಮತ್ತು ಸ್ಟಾರ್ಚ್ ದ್ರಾವಣವನ್ನು ಹಚ್ಚಬೇಕು. ಒಮ್ಮೆ ಹಚ್ಚಿದ್ದು ಒಣಗಿದ ಬಳಿಕವೇ ಮತ್ತಿನ ಪದರವನ್ನು ಹಚ್ಚಬೇಕು. ಸಾಮಾನ್ಯವಾಗಿ 4 ಬಾರಿ ಹಚ್ಚಬೇಕಾಗುತ್ತದೆ. ಆ ಬಳಿಕ ಈ ಕಾಗದವನ್ನು ಬಿಸಿಲಿನಲ್ಲಿ ಒಣಗಿಸಿಡಬೇಕು.

ಪೊಟೆಸಿಯಂ ನೈಟ್ರೇಟ್ ಒಂದು ಉತ್ತಮ ಆಕ್ಸೀಡಿಕಾಂತವೆಂಬುದನ್ನು ನೆನಪಿಡಬೇಕು. ತತ್ಕಾರಣವೇ ಅದನ್ನು ಮುಟ್ಟಿಸಿದ ಸ್ಥಳದಲ್ಲಿ ಮಾತ್ರ ಕಾಗದ ಉರಿಯುವುದು ವೀಕ್ಷಕರು ಇದು ಚಿಹ್ನೆಯ ಶಕ್ತಿಯಿಂದ ಎಂದು ನಂಬಿ. ಇದನ್ನು ನಡೆಸುವವ ಬಹಳ ಶಕ್ತಿಯುಳ್ಳವನೆಂದು ಭಾವಿಸುತ್ತಾರೆ!.



# ಮಾನಸಿಕ ಭ್ರಮೆಯ ಉಪಯೋಗ

ಮನಸ್ಸಿಗೆ ಭ್ರಮೆಯನ್ನುಂಟು ಮಾಡುವ ಮೂಲಕ ಮಾಟ, ಮಂತ್ರ, ಯಂತ್ರ, ತಂತ್ರಗಳನ್ನು ಪ್ರಯೋಗಿಸಲಾಗುತ್ತದೆ. ಮಾಟ, ಮಂತ್ರಗಳಿಗೊಳಗಾಗಿದ್ದೇನೆಂಬ ಭಯದಿಂದಲೇ ದೈಹಿಕ ಪರಿಣಾಮಗಳುಂಟಾಗುತ್ತವೆ. ಇಂತಹ ಪರಿಣಾಮಗಳು ನಡೆಯುವುದನ್ನು ತೋರಿಸಲು ಕೆಲವು ಪ್ರಯೋಗಗಳಿವೆ.ಈ ಪ್ರಯೋಗಗಳಿಂದ ಬರೇ ಇಂದ್ರಿಯಾನುಭವಗಳ ಮೂಲಕ, ಮಾನಸಿಕ ಸಲಹೆಗಳ ಮೂಲಕ ಯಾವ ರೀತಿಯಿಂದ ಮನುಷ್ಯನಲ್ಲಿ ಭ್ರಮೆಯನ್ನುಂಟು ಮಾಡಬಹುದೆಂದು ತೋರಿಸಬಹುದು.

## ಬ್ರಶ್ ಪ್ರಯೋಗ

ಬಟ್ಟೆಯುಜ್ಜುವ ಬ್ರಶ್ಶನ್ನು ವೀಕ್ಷಕರಿಗೆ ತೋರಿಸಲಾಗುತ್ತದೆ. ಬಳಿಕ, ಒಬ್ಬರನ್ನು ವೇದಿಕೆಗೆ ಆಹ್ವಾನಿಸಿ ಅವರ ಮೈಗೆ ಬ್ರಶ್ ಹೊಡೆಯಲಾಗುವುದು. ಎಷ್ಟು ಬಾರಿ ಬ್ರಶ್ ಮಾಡಲಾಗಿದೆಯೆಂಬ ಲೆಕ್ಕವಿಟ್ಟುಕೊಳ್ಳಬೇಕೆಂದು ತಿಳಿಸಲಾಗುತ್ತದೆ. ಬ್ರಶ್ ಹೊಡೆಸಿಕೊಳ್ಳುವಾತ, ಬ್ರಶ್ ಮಾಡುವಾತನಿಗೆ ಬೆನ್ನು ಮಾಡಿ ನಿಲ್ಲಬೇಕು. ಆ ಬಳಿಕ ಎಷ್ಟು ಬಾರಿ ಬ್ರಶ್ ಮಾಡಿದೆಯೆಂಬ ಲೆಕ್ಕವಿರಿಸಲು ಪ್ರಯತ್ನಿಸಿದರೂ ತಪ್ಪಾಗುತ್ತದೆ.

ಬ್ರಶ್ ಹೊಡೆಯುವಾತ, ಬ್ರಶ್ ಮಾಡಿಸಿಕೊಳ್ಳುವವನ ಬೆನ್ನಿನ ಮೇಲೆ ಕೈ ಮಾತ್ರ ಆಡಿಸುವುದು. ಅದೇ ಸಮಯದಲ್ಲಿ ಬ್ರಶ್ಶನ್ನು ತನ್ನ ಮೈಗೆ ಉಜ್ಜುತ್ತಾನೆ. ಆದರೆ, ಬ್ರಶ್ ಹೊಡೆಸಿಕೊಳ್ಳುವಾತ, ಈ ಶಬ್ಧಕ್ಕೂ ಮೈಮೇಲಿನ ಒತ್ತಡಕ್ಕೂ ಸಂಬಂಧ ಕಲ್ಪಿಸಿ, ತನ್ನ ಬಟ್ಟೆಗೆ ಬ್ರಶ್ ಮಾಡಲಾಗಿದೆಯೆಂದು ಕಲ್ಪಿಸಿಕೊಳ್ಳುತ್ತಾನೆ. ತತ್ಕಾರಣ, ಆತನ ಲೆಕ್ಕವು ಪ್ರತಿಯೊಮ್ಮೆಯೂ ತಪ್ಪಾಗಿರುತ್ತದೆ.

ಈ ಪ್ರಯೋಗದ ಮೂಲಕ ವೀಕ್ಷಕರಿಗೆ ಮಾಟ – ಮಂತ್ರ ಮಾಡುವವರು ಯಾವ ರೀತಿಯಲ್ಲಿ ನಮ್ಮ ಮನಸ್ಸಿನ ಭ್ರಮೆಗಳನ್ನು ಉಪಯೋಗಿಸಿಕೊಳ್ಳುತ್ತಾರೆಂದು ವಿವರಿಸಬಹುದು. ತಲೆ ಶೂಲೆ ಮಾಟ ಮಾಡಿದೆಯೆಂದು ತಿಳಿಸಿದಲ್ಲಿ ಇತರ ಯಾವುದೋ ಕಾರಣದಿಂದ ಬಂದಿರಬಹುದಾದ ತಲೆಶೂಲೆಯನ್ನು ಮಾಟದಿಂದ ಬಂದದ್ದೆಂದು ಭ್ರಮೆಯಾಗಬಹುದು. ಇದೇ ರೀತಿಯಲ್ಲಿ ಹೊಟ್ಟೆನೋವಾಗಲಿ, ಜ್ವರವಾಗಲೀ, ಇತರ ಯಾವುದೇ ದೈಹಿಕ ತೊಂದರೆಯಾಗಲಿ ಮಾಟ – ಮಂತ್ರಗಳಿಂದ ಬರುವುದು ಸಾಧ್ಯವಿದೆ. ಮಾಟ – ಮಂತ್ರ ಮಾಡುವವರೂ, ಅದನ್ನು ತೆಗೆಯುವವರೂ ಬರೇ ಈ ಮಾನಸಿಕ ಭ್ರಮೆಯ ಉಪಯೋಗವನ್ನು ಮಾಡಿಕೊಂಡು ಮೂಢ ನಂಬಿಕೆಗಳಿಂದ ಮೋಸಮಾಡುವುದು.

## ಜಾಮೂನ್ ಸಿಹಿ

ಕಾರ್ಯಕ್ರಮ ವೀಕ್ಷಿಸುವ ಚಿಕ್ಕ ಮಕ್ಕಳಲ್ಲಿ ಸುಮಾರು 4 – 6 ವರ್ಷದ ಮಕ್ಕಳನ್ನು ವೇದಿಕೆಗೆ ಆಹ್ವಾನಿಸಲಾಗುವುದು. ಬಳಿಕ, ಇವರಿಗೆ ಯಾವುದಾದರೂ ಪತ್ರಿಕೆಯಿಂದ ಕತ್ತರಿಸಲಾದ ಸಿಹಿ ತಿಂಡಿಯ ಚಿತ್ರ– ಸಾಮಾನ್ಯವಾಗಿ ಜಾಮೂನು– ತೋರಿಸಲಾಗುವುದು. ಸಿಹಿಯಾದ ಜಾಮೂನು ತಿನ್ನಿಸಲಾಗುವುದೆಂಬ ಆಸೆ ಹುಟ್ಟಿಸಿ, ಬೆರಳನ್ನು ಆ ಚಿತ್ರದ ಮೇಲಿರಿಸಿ, ಅದನ್ನೇ ನೋಡುತ್ತಾ ಹತ್ತು ಬಾರಿ ಜಾಮೂನಿನ ಶಬ್ದ ಉದ್ಧಾರ ಮಾಡಲು ತಿಳಿಸಲಾಗುತ್ತದೆ. ಬಳಿಕ, ಆ ಬೆರಳಿಗೆ ಸಿಹಿಯಾದ ರುಚಿಯಿದೆಯೆಂದು ಹೇಳಿ ಅದನ್ನು ಚೀಪಬೇಕೆಂದು ಹೇಳುವುದು. ಆಗ ಮಕ್ಕಳು ಸಿಹಿಯಾಗಿದೆಯೆಂದು ಒಪ್ಪುತ್ತಾರೆ ಅದೇ ಚಿತ್ರದ ಮೇಲೆ ಬೇರೆ ಯಾರಾದರೂ ದೊಡ್ಡವರಿಗೆ ಬೆರಳಿರಿಸಿ, ಆ ಬಳಿಕ ರುಚಿನೋಡಲು ತಿಳಿಸಿದಾಗ, ಅವರು ಈ ಚಿತ್ರಕ್ಕೆ ಏನೂ ರುಚಿಯಿಲ್ಲವೆಂದು ಪ್ರಮಾಣಿಸುತ್ತಾರೆ.

ಈ ಪ್ರಯೋಗದ ಮೂಲಕ ಮುಗ್ಧ ಮನಸ್ಸಿಗೆ ಮಾನಸಿಕ ಸಲಹೆ ಕೊಟ್ಟು ದೈಹಿಕ ಅನುಭವಗಳನ್ನು ಉಂಟುಮಾಡಲು ಸಾಧ್ಯವಿದೆಯೆಂದು ತೋರಿಸಬಹುದು.

## ಬರೆದಲ್ಲಿ ಪರಿಮಳ

ಪ್ರಯೋಗಕ್ಕೊಳಗಾಗಲು ಬಂದ ವ್ಯಕ್ತಿಗೆ ಒಂದು ಕಾಗದವನ್ನು ತೋರಿಸಲಾಗುತ್ತದೆ. ಆ ಕಾಗದವನ್ನು ಮೂಸಿ ನೋಡಿದಾಗ ಅದಕ್ಕೆ ಯಾವುದೇ ಪರಿಮಳವಿರುವುದಿಲ್ಲ. ತನ್ನ ಕೈಬೆರಳನ್ನು ಮೂಸಿ ನೋಡಲು ಆತನಿಗೆ ತಿಳಿಸಿದಾಗ ಅದಕ್ಕೂ ಯಾವುದೇ ಪರಿಮಳವಿಲ್ಲವೆಂದು ಒಪ್ಪುತ್ತಾನೆ.

ಬಳಿಕ, ಆ ಕಾಗದದ ಮೇಲೆ ಆತ ತನಗೆ ಬೇಕಾದ ಸುವಾಸನಾಯುಕ್ತ ಹೂ ಯಾ ಪರಿಮಳದ ಹೆಸರು ಬರೆಯುತ್ತಾನೆ. ಅದರ ಮೇಲೆ ಬೆರಳಿರಿಸಿ, ಹತು ಬಾರಿ ಅದೇ ಹೆಸರನ್ನು ಪುನರುಚ್ಚರಿಸಲಾಗುತ್ತದೆ. ಬಳಿಕ ಬೆರಳನ್ನು ಮೂಸಿ ನೋಡಿದಾಗ ಬರೆದ ಹೂವಿನ ಯಾ ಪರಿಮಳದ ಸುವಾಸನೆ. ಪೇಪರ್‌ಗೂ ಅದೇ ಪರಿಮಳ! ಬರೆದ ಪೆನ್ನಿನಲ್ಲಿ ಯಾವುದಾದರೂ ಪರಿಮಳ ದ್ರವ್ಯವನ್ನು ತುಂಬಿದೆಯೆಂದು ಸಂಶಯ ವ್ಯಕ್ತಪಡಿಸಿದಾಗ ಆ ಪೆನ್ನನ್ನು ಆತನ ಕೈಗೆ ಕೊಡಲಾಗುವುದು ಅದಕ್ಕೆ ಯಾವುದೇ ಪರಿಮಳವಿರುವುದಿಲ್ಲ. ಕಂಡವರು ಆಶ್ಚರ್ಯ ಚಕಿತರಾಗುತ್ತಾರೆ!.

ಇದಕ್ಕೆ ಹೆಸರು ಪಡೆದ ಸ್ವಾಮಿಯೋರ್ವ ಮಹಾರಾಷ್ಟ್ರದಲ್ಲಿದ್ದ. ಭಕ್ತರು ಸೂಚಿಸಿದ ಪರಿಮಳವನ್ನು ಅವರದ್ದೇ ಕರವಸ್ತ್ರದಿಂದ ಹೊರಹೊಮ್ಮುವಂತೆ ಪವಾಡ ನಡೆಸುತ್ತಿದ್ದನವನು. ವಾಸ್ತವವಾಗಿ, ಈತ ಯಾವಾಗಲೂ ಒಂದು ಮಣೆಯ ಮೇಲೆ ಕೂತಿರುತ್ತಿದ್ದ. ಈ ಮಣೆಯ ಬೇರೆ– ಬೇರೆ ಭಾಗಗಳಿಗೆ ವಿವಿಧ ರೀತಿಯ ಪರಿಮಳಗಳನ್ನು

ತಾಗಿಸಿಡಲಾಗಿತ್ತು! ಒಂದೊಂದಕ್ಕೆ ಒಂದು ಬೆರಳನ್ನು ಉಪಯೋಗಿಸುತ್ತಿದ್ದ ಈತ. ಈ ಪರಿಮಳಗಳು ಮಿಶ್ರಣವಾಗದಂತೆ ಜಾಗ್ರತೆ ವಹಿಸುತ್ತಿದ್ದ!

ಪೇಪರ್‌ನಲ್ಲಿ ಬರೆದ ಹೆಸರಿನಿಂದ ಪರಿಮಳ ತರಿಸುವುದು ಅತಿ ಸುಲಭ. ಸಾಮಾನ್ಯವಾದ ಕೆಲವು ಪರಿಮಳಗಳನ್ನು ಶಾಯಿಗೆ ಸೇರಿಸಿ. ಅದನ್ನು ಒಂದು ಪೆನ್ನಿಗೆ ತುಂಬಿಸಲಾಗುತ್ತದೆ. ಪ್ರಯೋಗ ನಡೆಸಿದ ಬಳಿಕ. ಈ ಪೆನ್ನನ್ನು ಒಳ ಜೇಬಿಗೆ ಸೇರಿಸಬೇಕು. ಅದೇ ರೀತಿಯ ಇನ್ನೊಂದು ಪೆನ್ನು ಹೊರ ಜೇಬಿನಲ್ಲಿರಿಸಬೇಕು. ಅದರಲ್ಲಿ ಸಾಮಾನ್ಯ ಶಾಯಿಯಿರಬೇಕು. ಪರೀಕ್ಷೆ ಮಾಡಲಿಚ್ಛಿಸುವವರಿಗೆ ಇದನ್ನು ಕೊಟ್ಟರಾಯಿತು!

ಮಾನಸಿಕ ಸಲಹೆ ಮೂಲಕ ದೈಹಿಕ ಅನುಭವವನ್ನುಂಟು ಮಾಡುವ ಪ್ರಯೋಗಗಳಲ್ಲಿ ಇದೂ ಒಂದು.

## ಕಲ್ಲು ದೇಹ

ಕೆಲವು ಮನೋರೋಗಿಗಳು ದೇಹವನ್ನು ಕಲ್ಲಿನಂತೆ ಮಾಡಿಕೊಂಡು ನಿಂತಿರುತ್ತಾರೆ. ಇದಕ್ಕೆ ಕೆಟಲೆಪ್ಸಿ ಎನ್ನುತ್ತಾರೆ. ಇದನ್ನು ಸಾಮಾನ್ಯರಲ್ಲಿ ಮಾಡಿತೋರಿಸಬಹುದು. ಕೆಲವು ಸಮ್ಮೋಹಿನಿಕಾರರು (hypnotist) ಇದನ್ನು ತಮ್ಮ ಸಮ್ಮೋಹಿನಿಯ ಪ್ರಯೋಗವೆಂದು ತೋರಿಸುತ್ತಾರೆ.

ಸುಮಾರು 18 – 25 ವರ್ಷದ ತೆಳ್ಳಗಿನ ಆದರೆ ಬಲಶಾಲಿ ಮೈಕಟ್ಟಿನ ಯುವಕನನ್ನು ವೇದಿಕೆಗೆ ಆಹ್ವಾನಿಸಲಾಗುವುದು. ಬಳಿಕ. ಆತನಿಗೆ ಸಮ್ಮೋಹಿನಿಕಾರರು ಕೊಡುವಂತೆ ಆಜ್ಞೆಗಳನ್ನು ಕೊಡಬೇಕು. ಕಣ್ಣು ಮುಚ್ಚಿ. ದೇಹದ ಅಂಗಗಳನ್ನೆಲ್ಲಾ ಬಿಗಿಯಾಗಿ ಸೆಟೆದುಕೊಳ್ಳಲು ತಿಳಿಸಬೇಕು. ಆತನ ದೇಹದ ಒಂದೊಂದೇ ಅಂಗವನ್ನು ಮುಟ್ಟಿ. ಅವುಗಳನ್ನು ಗಟ್ಟಿಯಾಗಿ ಮಾಡಿಕೊಂಡಿದ್ದಾನೊ ಎಂದು ಪರೀಕ್ಷಿಸಿದ ಬಳಿಕ ಆತನ ತಲೆ ಮತ್ತು ಹೆಗಲು ಒಂದು ಕುರ್ಚಿಯ ಮೇಲೆ. ಮೊಣಕಾಲು ಕೆಳಗಿನ ಭಾಗ ಇನ್ನೊಂದು ಕುರ್ಚಿಯ ಮೇಲಿರಿಸಬೇಕು. ಹೊಟ್ಟೆಯನ್ನು ಒತ್ತಿದಾಗ ದೇಹ ಬಾಗಬಾರದು. ಬಳಿಕ. ಹೊಟ್ಟೆಯ ಮೇಲೆ ಸುಮಾರು 30 – 40 ಕಿ. ಗ್ರಾಂ ತೂಕದವರನ್ನು ನಿಲ್ಲಿಸಬಹುದು. ಪ್ರಯೋಗದ ಬಳಿಕ ಆತನನ್ನು ಎಬ್ಬಿಸಿ. ಕಣ್ಣು ತೆರೆಯಲು ಆಜ್ಞಾಪಿಸಿ. ದೇಹದ ಒಂದೊಂದೇ ಅಂಗವನ್ನು ಸಡಲಿಸಲು ತಿಳಿಸಬೇಕು.

ಇದರಿಂದ ಬರೇ ಮಾನಸಿಕ ಸಲಹೆಯಿಂದ ದೇಹವನ್ನು ಕಲ್ಲಿನಂತೆ ಮಾಡಬಹುದೆಂದು ತೋರಿಸಬಹುದು. ಮನೋರೋಗಗಳನ್ನು ಮಾಟ– ಮಂತ್ರಗಳ ಮೂಲಕ ಉಂಟುಮಾಡುವವರು ಇದೇ ತಂತ್ರವನ್ನು ಉಪಯೋಗಿಸುತ್ತಾರೆ. ತತ್ಕಾರಣ. ಮಾಟ ಮಾಡಿದೆಯೆಂದು ತಿಳಿದೊಡನೆ ಅದರ ಗುರಿಯಾದ ವ್ಯಕ್ತಿ ಮಾಟ ಮಾಡಿದಾತನ ಅಪೇಕ್ಷೆಯ



ರೋಗ ಲಕ್ಷಣಗಳನ್ನು ತೋರಿಸಲು ಆರಂಭಿಸುತ್ತಾನೆ. ಮಾಟವನ್ನು ತೆಗೆಯುವಾತನೂ ಇದೇ ತತ್ವದ ಉಪಯೋಗ ಮಾಡುವುದು!

## ಸಾಮೂಹಿಕ ಉನ್ಮಾದದಲ್ಲಿ ದೇಹ ವಾಲುವುದು

6 – 10 ವಯಸ್ಸಿನ ಮಗುವನ್ನು ವೇದಿಕೆಗೆ ಕರೆಸಿ. ಕಣ್ಣು ಮುಚ್ಚಿ ಕೈಗಳನ್ನು ಮೇಲೆತ್ತಿ ನಿಲ್ಲಲು ತಿಳಿಸುವುದು. ಬಳಿಕ. ಈ ಮಗುವಿಗೆ ದೇಹವನ್ನು ಮುಂದೆ ವಾಲಿಸುತ್ತಿ ಎಂದು ತಿಳಿಸುತ್ತಾ ಹೋಗುವುದು. ಆಗ, ಮಗು ದೇಹವನ್ನು ಮುಂದೆ – ಹಿಂದೆ ವಾಲಿಸಲು ಆರಂಭಿಸುತ್ತದೆ. ಕೊನೆಗೊಂದು ಹಂತದಲ್ಲಿ ನಿಲ್ಲಲಾಗದೆ ಬೀಳುತ್ತಿ ಎಂದು ತಿಳಿಸಿದಾಗ ಮಗು ಬಿದ್ದೇ ಬಿಡುವುದು. ಆಗ ಅದು ಬೀಳದಂತೆ ಕೈಯ ಆಸರೆ ಕೊಡಬೇಕು.

ಈ ಪ್ರಯೋಗವನ್ನು ಸಾಮೂಹಿಕ ಉನ್ಮಾದದಲ್ಲಿ ದೇಹ ವಾಲುವುದನ್ನು ತೋರಿಸಲು ಉಪಯೋಗಿಸಬಹುದು. ಕೆಲವು ಸ್ಥಳಗಳಲ್ಲಿ ನಿರ್ದಿಷ್ಟ ಮಹೂರ್ತಗಳಲ್ಲಿ ಭಕ್ತರೆಲ್ಲರಿಗೂ ದೈವ ಸಂಚಾರವಾಗಿ ಅವರು ವಾಲುವುದಕ್ಕೆ ಆರಂಭಿಸುತ್ತಾರೆ. ಇವಕ್ಕೆ ಮಾನಸಿಕ ಸಲಹೆಯೇ ಕಾರಣ.

ಈ ಪ್ರಯೋಗದಲ್ಲಿ ಗಮನಿಸಬಹುದಾದ ಇನ್ನೊಂದು ವಿಶೇಷವೇನೆಂದರೆ ಕೆಲವರು ಮುಂದೆ ವಾಲುವ ಸೂಚನೆಯಿತ್ತಾಗ, ತಾವು ಬೀಳುತ್ತೇವೆ ಎಂದು ಹೆದರಿ ಹಿಂದೆ ವಾಲ ತೊಡಗುತ್ತಾರೆ! ಸಮತುಲಿತ ಪ್ರತಿಕ್ರಿಯೆಯು (Compensatory mechanism) ಇದಕ್ಕೆ ಕಾರಣ! ಕೆಲವೊಮ್ಮೆ ಮುಂದೆ ಬೀಳುತ್ತಿ ಎಂದು ತಿಳಿಸಿದಾಗ, ಇಂತಹವರು ಹಿಂದಕ್ಕೆ ಬಿದ್ದು ಬಿಡುತ್ತಾರೆ! ಇಲ್ಲಿ ಗಮನಿಸಬೇಕಾದ ಇನ್ನೊಂದು ವಿಷಯವೇನೆಂದರೆ ಈ ಮಾನಸಿಕ ಸಲಹೆ ಪ್ರಯೋಗಗಳನ್ನು ನಡೆಸಿದಾಗ ವೀಕ್ಷಕರು ನಿಶ್ಶಬ್ಧರಾಗಿದ್ದು ಯಾವುದೇ ರೀತಿಯ ತೊಂದರೆಯನ್ನು ಮಾಡಬಾರದು.

ಮಾಟ – ಮಂತ್ರ – ಸಾಮೂಹಿಕ ಉನ್ಮಾದಗಳು ಮನಸ್ಸಿಗೆ ಕೊಟ್ಟ ಸಲಹೆಗಳ ದೈಹಿಕ ಲಕ್ಷಣಗಳು. ಇವುಗಳನ್ನು ಮಾಡುವವರು ಹೆಚ್ಚಿನ ಸಮಯಗಳಲ್ಲಿ ತಮ್ಮ ಬಲಗಳ ಮಾನಸಿಕ ದೌರ್ಬಲ್ಯವನ್ನು ಉಪಯೋಗಿಸಿಕೊಳ್ಳುತ್ತಾರೆ. ಆದರೆ, ಕೆಲವೊಮ್ಮೆ ಈ ಬಲಿಪಶುಗಳಿಗೆ ತಿಳಿಯದಂತೆ ಮಾನಸಿಕ ಯಾ ದೈಹಿಕ ವಿಕಾರಗಳುಂಟಾಗುವ ಸಸ್ಯಜನ್ಯ ರಾಸಾಯನಿಕಗಳನ್ನು ಉಪಯೋಗಿಸುವುದೂ ಇದೆ.

ವೀಕ್ಷಕರಿಗೆ ಇಂತಹ ಪ್ರಯತ್ನಗಳನ್ನು ನಿಷ್ಕ್ರಿಯಗೊಳಿಸಲು ಮನೋಸ್ಥೈರ್ಯ ಹಾಗೂ ಇವು ನಡೆಯುವ ತತ್ವಗಳ ತಿಳಿವಳಿಕೆಯ ಅಗತ್ಯಗಳನ್ನು ಒತ್ತಿ – ಒತ್ತಿ ಹೇಳಬೇಕು. ಅಗತ್ಯವಿದ್ದಲ್ಲಿ, ಈ ಮಾಟ – ಮಂತ್ರಗಳನ್ನು ಪ್ರಯೋಗಗಳ ಮೂಲಕ ತೋರಿಸಬೇಕೆಂಬ ಪಂಥಾಹ್ವಾನವನ್ನೂ ಒಡ್ಡಬಹುದು.



# ನೋವು ನಿಗ್ರಹಿಸುವ ಪವಾಡಗಳು

ಗಾಜು ತುಂಡುಗಳ ಮೇಲೆ ನಿಂತಿರುವ, ಬಲ್ಬ್ ಒಡೆದು ತಿನ್ನುವ, ಮುಳ್ಳಿನ ಹಾಸಿಗೆಯ ಮೇಲೆ ನಿಲ್ಲುವ, ನಾಲಿಗೆಗೆ ತ್ರಿಶೂಲ ಇತ್ಯಾದಿ ವಿವಿಧ "ಪವಾಡ"ಗಳನ್ನು ಮಾಡುವ ವ್ಯಕ್ತಿಗಳನ್ನು ನಾವು ಕಂಡಿರಬಹುದು. ಇವರನ್ನು ನೋಡುವವರಿಗೆ ಇವರಿಗೆ ಯಾವುದೋ ದೈವಿಕ ಶಕ್ತಿಯಿರುವ ಕಾರಣ ಯಾವುದೇ ಅಪಾಯವಾಗುವುದಿಲ್ಲವೆಂಬ ಭ್ರಮೆಯಾಗುವುದು ಸಹಜ. ಆದರೆ, ವಾಸ್ತವವಾಗಿ ಇವರು ನಡೆಸುವ ಪವಾಡಗಳಿಗೆ ಯಾವುದೇ ಅತಿಮಾನುಷ ಶಕ್ತಿಯ ಅಗತ್ಯ ಯಾ ನೋವನ್ನು ತಡೆದುಕೊಳ್ಳುವ ಸಾಮರ್ಥ್ಯವು ಬೇಡ.

## ಚಲಿಸದ ಕತ್ತಿ ಕತ್ತರಿಸುವುದಿಲ್ಲ

ಸುಮಾರು $2\frac{1}{2}$ ಅಡಿ ಉದ್ದದ ಒಂದೇ ರೀತಿಯ ಕತ್ತಿಗಳನ್ನು ವೀಕ್ಷಕರಿಗೆ ತೋರಿಸಲಾಗುತ್ತದೆ. ಈ ಕತ್ತಿಗಳು ಹರಿತವಾಗಿವೆಯೆಂದು ತೋರಿಸಲು ಸೌತೆಕಾಯಿ, ಮುಲ್ಲಂಗಿ ಯಾ ಕ್ಯಾರೆಟ್ ಕತ್ತರಿಸಲಾಗುವುದು. ಬಳಿಕ, ಇವುಗಳನ್ನು ಭದ್ರವಾಗಿ ಇಬ್ಬರು ಹಿಡಿದುಕೊಳ್ಳುತ್ತಾರೆ. ವೀಕ್ಷಕರ ಮಧ್ಯೆಯಿಂದ ಆರಿಸಲಾದ ಚಿಕ್ಕ ಹುಡುಗ ಈ ಕತ್ತಿಗಳ ಮೇಲೆ ನಿಲ್ಲುತ್ತಾನೆ. ಕಾಲಿಗೆ ಗಾಯ ಯಾ ನೋವು ಆಗುವುದಿಲ್ಲ. ನೋಡುವವರಿಗಿದೊಂದು ಆಶ್ಚರ್ಯ.

ದ. ಭಾರತದ ಕೆಲವು ಕಡೆಗಳಲ್ಲಿ ಮೈಯಲ್ಲಿ ಭೂತ ಸಂಚಾರವಾದಾಗ ಕತ್ತಿ ಮೇಲೆ ನಿಂತು, ಭೂತದ ಶಕ್ತಿಯಿಂದಾಗಿ ಇವುಗಳಿಂದ ಗಾಯವಾಗುವುದಿಲ್ಲವೆಂದು ಪ್ರಚಾರ ಮಾಡಲಾಗುತ್ತದೆ.

ಇಲ್ಲಿ ಗಮನಿಸಬೇಕಾದ ಮುಖ್ಯವಾದ ವಿಷಯಗಳೇನೆಂದರೆ:

1. ಕತ್ತಿಗಳು ಬಾಗದ ಲೋಹದವಾಗಿರಬೇಕು.

2. ಅವು ಅಡ್ಡ ತಿರುಗದಂತೆ ಭದ್ರವಾಗಿ ಹಿಡಿದಿರಬೇಕು.

3. ನಿಲ್ಲುವಾಗ ಭಾರವು ಸಮನಾಗಿ ಹಂಚಿಹೋಗಬೇಕು.

4. ಕತ್ತಿಗಳನ್ನು ಹಿಡಿದವರು ಅವೆರಡು ಒಂದೇ ಮಟ್ಟದಲ್ಲಿರುವಂತೆ ಜಾಗ್ರತೆವಹಿಸಬೇಕು.

ಈ ವಿಷಯಗಳನ್ನೆಲ್ಲಾ ಗಮನದಲ್ಲಿರಿಸಿಕೊಂಡರೆ, ಹರಿತವಾದ ಕತ್ತಿಗಳ ಮೇಲೆ ನಿಲ್ಲುವುದು ಪವಾಡವಲ್ಲ. ಇದನ್ನು ಮಾಡಿತೋರಿಸಲು ಯಾವುದೇ ದೈವಿಕ ಶಕ್ತಿಯ ಅಗತ್ಯವಿಲ್ಲ.

## ಮೊಳೆಗಳ ಹಲಗೆ

ಹಲವು ನೂರು ಹರಿತವಾದ ಮೊಳೆಗಳಿರುವ ಹಲಗೆಯಿರುತ್ತದೆ. ಈ ಚೂಪಾದ ಮೊಳೆಗಳ ಮೇಲೆ "ಹಠಯೋಗಿ" ನಿಲ್ಲುತ್ತಾನೆ. ಮೊಳೆಗಳು ಚುಚ್ಚಿಕೊಳ್ಳದಿರಲು, ದೈವಿಕ ಶಕ್ತಿಯೇ ಕಾರಣವೆನ್ನಲಾಗುತ್ತದೆ.

ಎರಡಡಿ ಉದ್ದ ಮತ್ತಗಲದ ಒಂದು ಹಲಗೆಗೆ ಒಂದಿಂಚು ಅಂತರದಲ್ಲಿ ಹರಿತವಾದ ಮೊಳೆಗಳನ್ನು ಬಡಿಯಲಾಗುತ್ತದೆ. ಈ ಮೊಳೆಗಳೆಲ್ಲವೂ ಒಂದೇ ರೀತಿಯದ್ದಾಗಿರಬೇಕು ಮಾತ್ರವಲ್ಲದೆ, ಇವುಗಳ ಎತ್ತರವು ಒಂದೇ ಇರಬೇಕು. ಈ ಮೊಳೆಗಳ ಹಲಗೆಯ ಮೇಲೆ ಯಾರೂ ನಿಲ್ಲಬಹುದು. ಕಾಲನ್ನು ಜಾಗರೂಕತೆಯಿಂದ ಅವುಗಳ ಮೇಲಿರಿಸಿ, ತೂಕವನ್ನು ಸಮನಾಗಿ ಹಂಚಿ ನಿಂತರಾಯಿತು. ಇವು ಚುಚ್ಚಿಕೊಳ್ಳುವುದಿಲ್ಲ.

ಈ ಪ್ರಯೋಗದ ಒಳಗುಟ್ಟೇನೆಂದರೆ, ಹರಿತವಾದ ಮೊಳೆಗಳ ಮೇಲೆ ನಿಂತರೂ ತೂಕವು ಸಮನಾಗಿ ಹಲವಾರು ಬಿಂದುಗಳ ಮೇಲೆ ಹಂಚಿ ಬೀಳುವ ಕಾರಣ, ಇವು ಚುಚ್ಚಿಕೊಳ್ಳುವುದಿಲ್ಲ. ಈ ಮೊಳೆಗಳ ಮೇಲೆ ನಿಂತಾಗ ನೆನಪಿಡಬೇಕಾದ ವಿಷಯವೇನೆಂದರೆ



ಭದ್ರವಾಗಿ ನಿಂತುಕೊಂಡಿದ್ದು ಆತುರದ ಚಲನೆಗಳನ್ನು ಮಾಡಬಾರದು. ಅಕಸ್ಮಾತ್ತಾಗಿ ಇಂತಹ ಚಲನೆಗಳನ್ನು ಮಾಡಿ. ತೂಕವು ಅತೀ ಚಿಕ್ಕ ಬಿಂದುವಿನ ಮೇಲೆ ಕೇಂದ್ರಿಕೃತವಾದರೆ ಮೊಳೆಗಳು ಚುಚ್ಚಿಕೊಳ್ಳುವ ಸಾಧ್ಯತೆ ಇದೆ. ಮುಳ್ಳಿನ ಹಾಸಿಗೆಗಳ ಮೇಲೆ ಮಲಗುವವರು. ಮುಳ್ಳಿನ ರಾಶಿಯ ಮೇಲೆ ಬಿದ್ದುಕೊಳ್ಳುವವರೂ ಇದೇ ತತ್ವದ ಉಪಯೋಗವನ್ನು ಮಾಡಿಕೊಳ್ಳುತ್ತಾರೆ.

## ನಾಲಿಗೆಗೆ ಚುಚ್ಚುವ ತ್ರಿಶೂಲ

ಚೂಪಾದ ಮೊನೆಯಿರುವ ತ್ರಿಶೂಲವನ್ನು ವೀಕ್ಷಕರ ಕೈಗೆ ಕೊಡಲಾಗುತ್ತದೆ. ಅವರು ಅದನ್ನು ಪರೀಕ್ಷಿಸಿದ ಬಳಿಕ ಇದನ್ನು ನಾಲಿಗೆಗೆ ಚುಚ್ಚಿಸಿಕೊಳ್ಳಲು ಉತ್ಸಾಹವಿರುವವರನ್ನು ವೇದಿಕೆಗೆ ಕರೆಯಲಾಗುತ್ತದೆ. ಆದರೆ, ಇವರು ಈ ತ್ರಿಶೂಲದ ಚೂಪಾದ ಮೊನೆಯನ್ನು ಕಂಡು ಭಯ ಪಡುತ್ತಾರೆ. ಆಗ, ಆ ತ್ರಿಶೂಲವನ್ನು ಕಾರ್ಯಕ್ರಮ ನಡೆಸುವವರೇ ತಮ್ಮನಾಲಿಗೆಗೆ ಚುಚ್ಚಿಕೊಳ್ಳುತ್ತಾರೆ. ತ್ರಿಶೂಲ ಚುಚ್ಚಿಕೊಂಡಿರುವ ನಾಲಿಗೆಯನ್ನು ಎಲ್ಲರಿಗೂ ತೋರಿಸಲಾಗುತ್ತದೆ.

ಈ "ಪವಾಡ" ನಡೆಯುವುದು ಹೇಗೆ? ಮುಖ್ಯವಾಗಿ ಇಲ್ಲಿ ಎರಡು ಒಂದೆ ರೀತಿಯ ತ್ರಿಶೂಲಗಳಿರುತ್ತವೆ. ಆದರೆ ಒಂದರ ಮಧ್ಯದಲ್ಲಿ ಆಕಾರದ ತಿರುವಿರುತ್ತದೆ. ಪ್ರೇಕ್ಷಕರನ್ನು ಮಾತಿನಲ್ಲಿ ಮರೆಸಿ. ಮೊದಲ ತ್ರಿಶೂಲವನ್ನು ಬದಲಿಸಿ. ಈ ತಿರುವಿರುವ ತ್ರಿಶೂಲದಿಂದ ನಾಲಿಗೆಯನ್ನು "ಚುಚ್ಚ" ಕೊಳ್ಳಲಾಗುತ್ತದೆ - ಅರ್ಥಾತ್. ನಾಲಿಗೆಯನ್ನು ಈ ತಿರುವಿನ ಮೂಲಕ ನೂಕಿ. ನೋಡುವವರಿಗೆ ನಾಲಿಗೆಗೆ ತ್ರಿಶೂಲ ಚುಚ್ಚಲಾಗಿದೆಯೆಂಬ ಭ್ರಮೆಯನ್ನುಂಟು ಮಾಡಲಾಗುತ್ತದೆ.

ಆದರೆ, ಇಲ್ಲಿ ನೆನಪಿಡಬೇಕಾದ ಒಂದು ವಿಷಯವೇನೆಂದರೆ ನಾಲಿಗೆಗೆ ನಿಜವಾದ ತ್ರಿಶೂಲವನ್ನು ಚುಚ್ಚಿಕೊಳ್ಳುವವರೂ ಇದ್ದಾರೆ. ಇವರು ನೋವನ್ನು ತಡೆದುಕೊಂಡು ಈ "ಪವಾಡ" ಮಾಡುತ್ತಾರೆ.

## ಕೈಗೆ ನಿಂಬೆಹಣ್ಣು ಹೊಲಿದುಕೊಳ್ಳುವುದು

ಕೆಲವು ಜಾತ್ರೆಗಳಲ್ಲಿ "ಅಮ್ಮ"ನ ಭಕ್ತರು ಮೈ - ಕೈಗಳಿಗೆ ನಿಂಬೆ ಹಣ್ಣುಗಳನ್ನು ಹೊಲಿದುಕೊಂಡಿರುವುದನ್ನು ನಾವು ಗಮನಿಸಿರಬಹುದು. ಈ ಹಣ್ಣುಗಳನ್ನು ಹೊಲಿದಾಗ ಶಕ್ತಿಯ ಪ್ರಭಾವದಿಂದ ಅವರಿಗೆ ಯಾವುದೇ ನೋವಾಗುವುದಿಲ್ಲವೆಂದು ಪ್ರಚಾರಮಾಡುತ್ತಾರೆ.

ಇದನ್ನು ಮಾಡಲು ನಿಂಬೆ ಹಣ್ಣುಗಳು, ಹೊಸ ಸೂಜಿ ಮತ್ತು ದಾರ ಬೇಕು. ಯಾರ ಕೈಗೆ ನಿಂಬೆ ಹಣ್ಣು ಹೊಲಿಯಬೇಕೊ ಆತನನ್ನು / ಅವಳನ್ನು ವೇದಿಕೆಗೆ ಆಹ್ವಾನಿಸಿ, ಪ್ರೇಕ್ಷಕರತ್ತ ನೋಡಲು ಸೂಚಿಸಬೇಕು. ನೋಡುತ್ತಿರುವಾಗ ಅಂಗೈಯ ಹಿಂದಿನ ಭಾಗದ ಚರ್ಮದ ಒಂದು ಪದರವನ್ನು ಎತ್ತಿ, ಸೂಜಿ ಚುಚ್ಚಿ ನಿಂಬೆ ಹಣ್ಣನ್ನು ಹೊಲಿದುಬಿಡಬೇಕು. ಪ್ರೇಕ್ಷಕರು ಆ ಹಣ್ಣು ನಿಜವಾಗಿ ಹೊಲಿದಿದೆ ಎಂದು ಪರೀಕ್ಷಿಸಿದ ಬಳಿಕ, ದಾರ ಕತ್ತರಿಸಿ ಅದನ್ನು ತೆಗೆಯಬೇಕು.

ಸೂಜಿ, ದಾರದಿಂದ ನಿಂಬೆ ಹಣ್ಣನ್ನು ಚರ್ಮಕ್ಕೆ ಹೊಲಿದರೆ ನೋವಾಗುವುದುದಿಲ್ಲವೇ ಎಂದು ಪ್ರಶ್ನೆ. ಇದಕ್ಕೆ ವಿವರಣೆಗಳು ಹೀಗೆವೆ.

1. ಉಪಯೋಗಿಸುವುದು ಹೊಸ, ಹರಿತವಾದ, ತೆಳ್ಳಗಿನ ಸೂಜಿ.

2. ಹೊಲಿಯುವ ಮೊದಲು ಚರ್ಮವನ್ನು ಎತ್ತಿ, ಚಿವುಟಿ ಹಿಡಿಯಲಾಗುತ್ತದೆ.

3. ಹೊಲಿಸಿಕೊಳ್ಳುವ ವ್ಯಕ್ತಿ ಪ್ರೇಕ್ಷಕರತ್ತ ಗಮನ ಹರಿಸುವ ಕಾರಣ, ಚುಚ್ಚಿದ ನೋವು ಗೊತ್ತಾಗುವುದಿಲ್ಲ.

4. ಚರ್ಮದಲ್ಲಿನ ಗ್ರಾಹಕಗಳು ಚೋದನೆಗೆ ಪ್ರತಿಕ್ರಿಯಿಸಿದರೂ, ಮತ್ತೆ ಮತ್ತೆ ಅದೇ ಚೋದನೆಯೇ ಮುಂದುವರಿದಲ್ಲಿ ಅವು ಇದಕ್ಕೆ ಒಗ್ಗಿಕೊಳ್ಳುತ್ತವೆ.

ಈ ಪ್ರಯೋಗದಲ್ಲಿ ಗಮನಿಸಬೇಕಾದ ವಿಷಯವೇನೆಂದರೆ ಯಾವಾಗಲೂ ಹೊಸ, ಹರಿತವಾದ ಸೂಜಿಯನ್ನೇ ಉಪಯೋಗಿಸಬೇಕು. ಒಮ್ಮೆ ಉಪಯೋಗಿಸಲಾದ ಸೂಜಿಯನ್ನು ಮತ್ತೆ ಉಪಯೋಗಿಸಬಾರದು. ಉಪಯೋಗ ಮಾಡಿದ ಸೂಜಿಯನ್ನು ನಿಂಬೆ ಹಣ್ಣನ್ನು ಅವುಗಳನ್ನು ಚುಚ್ಚಿಸಿಕೊಂಡವರಿಗೆ ಕೊಡುವುದು ಉತ್ತಮ!.

ಇದೇ ರೀತಿಯಲ್ಲಿ ಬೆನ್ನು ಹುರಿಗೆ ಕೊಕ್ಕೆ ಸಿಕ್ಕಿಸಿ ಹೊಡೆಯುವುದು. ಹೊಕ್ಕುಳಿಗೆ'ದಾರ" ಎಳೆಯುವುದು ಇತ್ಯಾದಿಗಳನ್ನು ಮಾಡುತ್ತಾರೆ. ಇಂತಹ ಸಂದರ್ಭಗಳಲ್ಲಿ ಜೋರಾಗಿ ಶಬ್ಧ ಮಾಡಿ, ತಮಟೆ ಹೊಡೆದು ಡೋಲು ಬಾರಿಸಿ, ಇವುಗಳನ್ನು ನಡೆಸುವವರ ಗಮನವನ್ನು ಬೇರೆಡೆಗೆ ಸೆಳೆಯಲಾಗುತ್ತದೆ. ಇವುಗಳನ್ನು ಮಾಡುವಾಗ ಪ್ರತಿರೋಧಕ (ontiseptic)ಗಳಾದ ಅರಿಸಿನ ಮುಂತಾದವುಗಳನ್ನೂ ಉಪಯೋಗಿಸಲಾಗುತ್ತದೆ. ಕೆಲವರಂತೂ ಹೊಟ್ಟೆ ಪಾಡಿಗಾಗಿ ಈ ನೋವನ್ನು ಸಹಿಸಿಕೊಳ್ಳುತ್ತಾರೆ.

ನಮ್ಮ ಮೇಲಿನ ಉದಾಹರಣೆಗಳ ಮೂಲಕ ನೋವಾಗದಿದ್ದರೂ ನೋಡುಗರಿಗೆ ನೋವಾಗಿದೆಯೆಂಬ ಭ್ರಮೆ ಬರುವಂತಹ ಕೆಲವು ಪ್ರಯೋಗಗಳು ಮತ್ತು ಸ್ವಲ್ಪ ಮಟ್ಟಿಗೆ ನೋವನ್ನು ತಡೆದುಕೊಂಡು ಮಾಡುವ ಪ್ರಯೋಗಗಳನ್ನು ತೋರಿಸಬಹುದು.

# ಇತರ ಸಾಧನ, ತಂತ್ರಗಳನ್ನು ಉಪಯೋಗಿಸುವ "ಪವಾಡ"ಗಳು

## ನೀರಿನಿಂದ ಜೇನುತುಪ್ಪ

ನೀರನ್ನು ಪೆಟ್ರೋಲ್ ಮಾಡಿ ಪರಿವರ್ತಿಸಿದ ಖ್ಯಾತ ಪವಾಡ ಪುರುಷರೋರ್ವರು ನಮ್ಮಲ್ಲಿದ್ದಾರೆ. ಇದೇ ರೀತಿಯಲ್ಲಿ ನೀರನ್ನು ದ್ರಾಕ್ಷಾರಸವಾಗಿ ಪರಿವರ್ತಿಸಿದ ಪವಾಡದ ಉಲ್ಲೇಖ ಬೈಬಲ್‌ನಲ್ಲಿದೆ.

ವೀಕ್ಷಕರಿಗೆ ಒಂದು ಸ್ಟೀಲ್ ಲೋಟವನ್ನು ತೋರಿಸಲಾಗುತ್ತದೆ. ಬಳಿಕ. ಇದರೊಳಗೆ ನೀರು ಸುರಿದು. ಇನ್ನೊಂದು ಲೋಟವನ್ನು ಅದರ ಮೇಲೆ ಮುಚ್ಚಲಾಗುತ್ತದೆ. ಕೆಳಗಿನ ಲೋಟವನ್ನು ಹಿಡಿದು. ಮೇಲಿನದನ್ನು ಎತ್ತಿದಾಗ ಒಳಗೆ ಹಾಕಿದ ನೀರು ಮಾಯ? ಬದಲಿಗೆ ಜೇನು ತುಪ್ಪವಿರುತ್ತದೆ! ನೀರನ್ನು ಜೇನುತುಪ್ಪವನ್ನಾಗಿ ಪರಿವರ್ತಿಸುವ ಶಕ್ತಿ ನಮ್ಮಲ್ಲಿದೆಯೆಂದು ನಾವೇ ಹೇಳಿಕೊಳ್ಳಬಹುದು!

ನೀರನ್ನು ಜೇನುತುಪ್ಪವಾಗಿ ಪರಿವರ್ತಿಸುವುದು ಬಹಳ ಸುಲಭ. ಮೊದಲು ತೋರಿಸಿದ ಲೋಟವು ನಿಜವಾಗಿಯೂ ಎರಡು ಲೋಟಗಳು. ಒಂದು ಉದ್ದದ ಲೋಟದೊಳಗೆ ಚಿಕ್ಕದನ್ನು ಇರಿಸಲಾಗುವುದು. ಮೇಲಿನ ಚಿಕ್ಕ ಲೋಟಕ್ಕೆ ನೀರು ಸುರಿದು. ಅದರ ಮೇಲೆ ಮೂರನೆಯ ಲೋಟವನ್ನು ಮುಚ್ಚಿದಾಗ. ಒಳಗಿರುವ ಚಿಕ್ಕ ಲೋಟವು ಅದಕ್ಕೆ ಅಂಟಿಕೊಂಡು ಹೊರಗೆ ಬರುವುದು. ಹೊರಗಿನ ಮುಚ್ಚಿದ ಲೋಟವನ್ನು ಎತ್ತಿದಾಗ ಚಿಕ್ಕದು ಅದರ ಒಟ್ಟಿಗೆ ಬರುತ್ತದೆ. ಚಿಕ್ಕ ಲೋಟವು ಇಲ್ಲವಾದಾಗ ಅದರ ಕೆಳಗಿನ ಲೋಟದಲ್ಲಿರುವ ಜೇನು ತುಪ್ಪವು ಕಂಡು ಬರುವುದು!.

ಇದೇ ರೀತಿಯಲ್ಲಿ ನೀರನ್ನು ಪೆಟ್ರೋಲ್ ಆಗಿಯೋ. ದ್ರಾಕ್ಷಾರಸ ಆಗಿಯೋ ಪರಿವರ್ತಿಸಬಹುದೆಂಬ ವಿವರಣೆಯನ್ನು ಕೊಡಬಹುದು. ಇಲ್ಲಿ ಗಮನಿಸಬೇಕಾದ ಮುಖ್ಯಾಂಶವೇನೆಂದರೆ ಜೇನು ತುಪ್ಪವಿಡುವ. ಅದರ ಮೇಲೆ ಹಾಕಿ ನೀರು ಸುರಿಯುವ ಲೋಟಗಳು ಸ್ಟೇನ್‌ಲೆಸ್ ಸ್ಟೀಲ್‌ನದಾಗಿರಬೇಕು. ಬಳಿಕ. ಅವುಗಳ ಮೇಲೆ ಮುಚ್ಚುವ ಲೋಟವು ಅಲ್ಯುಮಿನಿಯಂದಾಗಿರಬೇಕು. ಲೋಟಗಳನ್ನು ಒಂದರೊಳಗೊಂದು ಸರಿಯಾಗಿ ಹಿಡಿಸುವಂತೆ ಪರೀಕ್ಷೆ ಮಾಡಿದ ಬಳಿಕವೇ ಖರೀದಿಸಬೇಕು.

## ಆಹಾರವನ್ನು ಬಹುಪಟ್ಟು ಮಾಡುವುದು.

ಕಡಿಮೆ ಪ್ರಮಾಣದಲ್ಲಿದ್ದ ಆಹಾರವನ್ನು ಅನೇಕ ಪಟ್ಟು ವೃದ್ಧಿಗೊಳಿಸಿದ ಪವಾಡಗಳ ಕಥೆ ನೀವು ಕೇಳಿರಬಹುದು. ಮಹಾಭಾರತದಲ್ಲಿ ದ್ರೌಪದಿಯು. ಬೈಬಲ್‌ನಲ್ಲಿ ಯೇಸುಕ್ರಿಸ್ತನೂ ಅತಿ ಕಡಿಮೆಯಿದ್ದ ಆಹಾರ ವಸ್ತುವನ್ನು ಬಹುಪಾಲು ಮಾಡಿದ್ದ ಉಲ್ಲೇಖವಿದೆ.

ವೀಕ್ಷಕರಿಗೆ ಎರಡು ಖಾಲಿ ಡಬ್ಬಗಳನ್ನು ಮುಖಕೆಳಗೆ ಮಾಡಿ ತೋರಿಸಲಾಗುತ್ತದೆ. ಎರಡೂ ನೋಡುವುದಕ್ಕೆ ಖಾಲಿ ಇದೆ. ಇವುಗಳಲ್ಲಿ ಒಂದಕ್ಕೆ ಎರಡು ಅಕ್ಕಿಯ ಕಣಗಳನ್ನು ಹಾಕಿ. ಇನ್ನೊಂದನ್ನು ಮುಚ್ಚಲಾಗುತ್ತದೆ. ಬಳಿಕ ಅವುಗಳನ್ನು ವಿಂಗಡಿಸಲಾಗುವುದು. ನೋಡಿದಾಗ ಒಂದಕ್ಕೆ ಹಾಕಿದ ಅಕ್ಕಿಯ ಎರಡು ಕಣಗಳು ಬಹಳಷ್ಟಾಗಿವೆ. ಒಂದೆರಡು ಕಣಗಳು ಒಂದು ಕಿಲೋಗಿಂತಲೂ ಹೆಚ್ಚಾಗಿವೆ.

ಈ "ಪವಾಡ"ಕ್ಕೆ ಎರಡು ವಿಶೇಷವಾದ ಪಾತ್ರೆಗಳು ಅಗತ್ಯ. ಯಾ ಇದಕ್ಕೂ ಹಿಂದಿನ ನೀರನ್ನು ಜೇನುತುಪ್ಪ ಮಾಡಿದ ಪ್ರಯೋಗದ ವಸ್ತುಗಳನ್ನೇ ಉಪಯೋಗಿಸಬಹುದು. ಅನ್ನದ ಒಂದೆರಡು ಕಣಗಳನ್ನು ಮೇಲಿನ ಪಾತ್ರೆಗೆ ಹಾಕಿ; ಕೆಳಗಿನದರಲ್ಲಿ ತುಂಬಾ ಅಕ್ಕಿಯನ್ನಿರಿಸಬಹುದು. ಮೇಲಿನ ಪಾತ್ರೆಯು ಮುಟ್ಟುವ ಪಾತ್ರೆಯೊಂದಿಗೆ ಎದ್ದು ಬರುವ ಕಾರಣ ಮುಟ್ಟಿ ತೆಗೆದಾಗ ಅಕ್ಕಿಯ ಪ್ರಮಾಣ ಹೆಚ್ಚುವ "ಪವಾಡ" ನಡೆದಂತೆ ಕಾಣುವುದು.

## ಕಲಂದರ್ ಬಾಬಾನ ಪವಾಡ

ಪೂನಾದ ಬಳಿ ಕಲಂದರ್ ಬಾಬಾ ಎಂಬಾತನ ದರ್ಗಾ ಇದೆ. ಅಲ್ಲಿ ಒಂದು ಕಲ್ಲನ್ನು ಬರೇ ಬೆರಳಿಂದ ಎತ್ತುವ "ಪವಾಡ" ನಡೆಯುತ್ತದೆ. ಈ ದರ್ಗಾದಲ್ಲಿ ಸುಮಾರು 80 ಕೆ.ಜಿ. ತೂಕದ ಕಲ್ಲಿಗೆ ನಾಲ್ಕು ಮಂದಿ ಬೆರಳು ಕೊಟ್ಟು ಕಲಂದರ್ ಬಾಬಾನ ಹೆಸರು ಹೇಳಿ ಅದನ್ನು ಅನಾಮತ್ತಾಗಿ ಎತ್ತಿಬಿಡುತ್ತಾರೆ. ಈತನ ಶಕ್ತಿಯಿಂದಾಗಿ ಕಲ್ಲಿನ ತೂಕವು ಲಘುವಾಗುತ್ತದೆಂಬುದು ಇದರ ವಿವರಣೆ.

ಪ್ರೇಕ್ಷಕರ ಮಧ್ಯೆ ಇರುವ ಹೆಚ್ಚು ತೂಕದ ವ್ಯಕ್ತಿಯೋರ್ವರನ್ನು ವೇದಿಕೆಗೆ ಆಹ್ವಾನಿಸಿ ಕೈಗಳಿಲ್ಲದ ಕುರ್ಚಿ ಯಾ ಸ್ಟೂಲಿನ ಮೇಲೆ ಕುಳ್ಳಿರಿಸಿದ ಬಳಿಕ ನಾಲ್ಕು ಮಂದಿ ಒಂದೇ ಗಾತ್ರದ ತೆಳ್ಳಗಿನ ವ್ಯಕ್ತಿಗಳನ್ನೂ ವೇದಿಕೆಗೆ ಕರೆಸಿ ಬಳಿಕ ತಮ್ಮ ತೋರುಬೆರಳುಗಳನ್ನು ಒಟ್ಟಾಗಿರಿಸಿ. ಅವುಗಳನ್ನು ಬಾಗದಂತಿರಿಸಲು ತಿಳಿಸಿ. ನಾಲ್ಕು ಮಂದಿಯೂ ತಮ್ಮ ಬೆರಳುಗಳನ್ನು ಮೊಣಕಾಲ ಹಿಂದಿನ ಸಂಧಿ. ಕಂಕುಳುಗಳಲ್ಲಿರಿಸಲು ತಿಳಿಸಿ. ಆ ಬಳಿಕ ವ್ಯಕ್ತಿಯನ್ನು ಎತ್ತುವ ಸೂಚನೆ ಕೊಡಿ. ಅವರಿಂದ ಎತ್ತಲಾಗುವುದಿಲ್ಲ. ಕಾರಣ ವಿಚಾರಿಸಿದರೆ. ಅದರ ಭಾರ ಬಹಳವಿದೆಯೆಂದು ತಿಳಿಸುತ್ತಾರೆ. ಆಗ. ಅವರ ಭಾರವನ್ನು ಕಡಿಮೆ ಮಾಡುವ ಮಂತ್ರವೊಂದು ನಮ್ಮಲ್ಲಿದೆಯೆಂದು ತಿಳಿಸಿ. ಇಂಗ್ಲೀಷಿನಲ್ಲಿ "one, two, three, up" ಎಂದು ಹೇಳಿದಾಗ ಒಮ್ಮೆಲೇ ಎತ್ತಬೇಕೆಂದು ಸೂಚಿಸಿ. ಮುಂದಿನ ಬಾರಿ ಅವರು ಬೆರಳುಗಳನ್ನು ಯಥಾಸ್ಥಾನದಲ್ಲಿರಿಸಿದಾಗ "one, two, three, up" ಎಂದು ಕೂಗಿ "up" ಹೇಳುವಾಗ ಅವರು ಎಷ್ಟೇ ಭಾರದ ವ್ಯಕ್ತಿಯಾಗಿರಲಿ. ಅವರನ್ನು ಸುಲಭವಾಗಿ ಎತ್ತುತ್ತಾರೆ!

ಈ ಪವಾಡದ ವಿವರಣೆಯೇನು? ಮೊದಲನೆಯ ಬಾರಿ ಎತ್ತುವಾಗ ಪ್ರತಿಯೊಬ್ಬರು ಭಾರದ ವ್ಯಕ್ತಿಯ ಪೂರ್ತಿ ತೂಕವನ್ನು ಎತ್ತಲು ಪ್ರಯತ್ನಿಸುತ್ತಾರೆ. ಆದರೆ ಅವರಿಗೆ



"ಮಂತ್ರ" ಭೋಧಿಸಿದಾಗ ಎಲ್ಲರೂ ಒಮ್ಮೆಲೇ ಎತ್ತುವ ಕಾರಣ, ತೂಕವು ಸಮನಾಗಿ ಹಂಚಿಬಿದ್ದು, ಅವರು ಎಷ್ಟೇ ಬಾರದ ವ್ಯಕ್ತಿಯನ್ನೂ ಸುಲಭವಾಗಿ ಎತ್ತುತ್ತಾರೆ!.

## ಎಲ್ಲರನ್ನೂ ಮೂರ್ಖ ಮಾಡುವುದು ಸುಲಭ

ಕೆಲವೊಮ್ಮೆ ಈ ಪವಾಡ ರಹಸ್ಯ ಬಯಲು ಕಾರ್ಯಕ್ರಮಗಳನ್ನು ನಡೆಸುವವರಿಗೆ ಪ್ರಶ್ನೆಗಳು ಬರುತ್ತವೆ. ಇದರಲ್ಲಿ ಒಂದು ಏನೆಂದರೆ, ಲಕ್ಷಾಂತರ ಮಂದಿ ಬಾಬಾ, ಪವಾಡ ಪುರುಷ, ದೇವರು, ದೆವ್ವಗಳನ್ನು ನಂಬುತ್ತಾರೆ. ಅವರೇನು ಮೂರ್ಖರೆ? ಎಂದು.

ಇದನ್ನು ತೋರಿಸಲು ಕೆಳಗೆ ತೋರಿಸಿರುವ ಪ್ರಯೋಗವನ್ನು ಉಪಯೋಗಿಸಿ. ಮೊದಲನೆಯದಾಗಿ, "ಎಲ್ಲರೂ ನಾನು ಹೇಳಿದಂತೆ ಮಾಡಬೇಕು " ಎಂದು ತಿಳಿಸಿ. "ಯಾರಿಗೆಲ್ಲಾ ಕನ್ನಡ ಅರ್ಥವಾಗುವುದು ಕೈ ಎತ್ತಿ" ಎನ್ನಿ. "ಎತ್ತಿದ ಕೈಗಳ ಬೆರಳುಗಳನ್ನು ಮಡಿಸಿ, ತೋರುಬೆರಳನ್ನು ಪ್ರತ್ಯೇಕವಾಗಿ ಹಿಡಿಯಿರಿ" ಎಂದು ಹೇಳುತ್ತಾ, ಇದನ್ನು ಮಾಡಿತೋರಿಸಿ. ಬಳಿಕ, "ಈ ಬೆರಳನ್ನು ನಿಮ್ಮ ಕೆನ್ನೆಯ ಮೇಲಿರಿಸಿ" ಎನ್ನುತ್ತಾ ನಿಮ್ಮ ಬೆರಳನ್ನು ನಿಮ್ಮ ಗದ್ದದ ಮೇಲೆ ಇರಿಸಿ. ಪ್ರೇಕ್ಷಕರಲ್ಲಿ 90 %ಕ್ಕಿಂತಲೂ ಹೆಚ್ಚಿನವರು, ನೀವು ಮಾಡಿದನ್ನೇ ಮಾಡುತ್ತಾರೆ! ಬೆರಳನ್ನು ಇಟ್ಟ ಕಡೆಯಲ್ಲೇ ಇರಿಸಿಯೆಂದು ಹೇಳಿದ ಬಳಿಕ

ಎಲ್ಲರಿಗೂ ನೀವು ಹೇಳಿದ ಮೊದಲನೆಯ ವಾಕ್ಯವನ್ನು ಪುನರುಚ್ಚರಿಸಿ. ಆಗ. ಎಲ್ಲರಿಗೂ ತಾವು ಸುಲಭವಾಗಿ ಮೂರ್ಖರಾದ ವಿಷಯ ನೆನಪಾಗುತ್ತದೆ!

ನಾವು ನಮ್ಮ ಬುದ್ಧಿ ಶಕ್ತಿಯನ್ನು ಉಪಯೋಗಿಸಲು ಕಲಿಯದಿರುವುದೇ ನಾವು ಪವಾಡ ಪುರುಷರಿಂದ ಮೋಸ ಹೋಗಲು ಕಾರಣವೆಂಬ ವಿವರಣೆ ಇಲ್ಲೇ ಇದೆ!.

## ಅತೀಂದ್ರಿಯ ಜ್ಞಾನದ ಪ್ರದರ್ಶನ

ಕೆಲವು ಪವಾಡ ಪುರುಷರು ತಮ್ಮಲ್ಲಿ ಇತರ ಮನಸ್ಸಿನಲ್ಲಿರುವುದನ್ನು ತಿಳಿದುಕೊಳ್ಳುವ ಶಕ್ತಿಯಿದೆಯೆಂದು ಹೇಳಿಕೊಳ್ಳುತ್ತಾರೆ. ಇದನ್ನು ನಂಬುವ ಶಿಷ್ಯ ವರ್ಗದವರೂ ಇದ್ದಾರೆ! ಮನಸ್ಸಿನಲ್ಲಿರುವುದನ್ನು ಓದುವುದು ಹೇಗೆಂದು ತೋರಿಸಲು ಪ್ರೇಕ್ಷಕ ವರ್ಗದಿಂದ ಯಾರಾದರೂ ಮುಂದೆ ಬರಬೇಕೆಂದು ತಿಳಿಸಿ.

ಯಾರಾದರೂ ಒಬ್ಬರು ಖಂಡಿತವಾಗಿ ಬರುತ್ತಾರೆ. ಆಗ. ಅವರನ್ನು ನಿಮಗೆ ಬೆನ್ನು ಮಾಡಲು ಹೇಳಿ. ಬಳಿಕ ಒಂದು ಸಂಖ್ಯೆಯನ್ನು ಮನಸ್ಸಿನಲ್ಲೇ ಸ್ಮರಿಸಲು ಹೇಳಿ. ಆತ. ಇದನ್ನು ಆರಂಭಿಸುವುದರೊಳಗೆ ಪ್ರೇಕ್ಷಕ ವರ್ಗದಿಂದ ಒಬ್ಬರು ಬಂದು ನಿಮ್ಮನ್ನು ತೆಗಳುತ್ತಾರೆ. ಮೇಲೆ ಬಂದಾತ ನಿಮ್ಮದೇ ವ್ಯಕ್ತಿಯೆಂದೂ ತಾಕತ್ತಿದ್ದಲ್ಲಿ ತನ್ನ ಮನಸ್ಸನ್ನು ಓದಬೇಕೆಂದೂ ಸವಾಲೆಸೆಯುತ್ತಾನೆ. ಆಗ. ಮೊದಲು ಮುಂದೆ ಬಂದ ವ್ಯಕ್ತಿ ಇದನ್ನು ನಿರಾಕರಿಸಿದರೂ ಆತ ಪಟ್ಟು ಬಿಡುವುದಿಲ್ಲ. ಕೊನೆಗೆ. ನೀವು ನಿಮ್ಮ ತಪ್ಪನ್ನು ಒಪ್ಪಿಕೊಂಡು. ಮೊದಲನೆಯ ವ್ಯಕ್ತಿಯನ್ನು ಹಿಂದೆ ಕಳುಹಿಸಿ. ಎರಡನೆಯ ವ್ಯಕ್ತಿಯ ಮನಸ್ಸನ್ನು ಓದಲು ಮುಂದಾಗುವಿರಿ.

ಈ ವ್ಯಕ್ತಿ ಮೊದಲು ಒಂದು ಸಂಖ್ಯೆಯನ್ನು ನೆನಪಿಡುತ್ತಾನೆ. ನೀವು ಆ ಸಂಖ್ಯೆ ತಿಳಿಸುತ್ತೀರಿ. ಕೋಪದಿಂದ ಅದನ್ನು ಸರಿಯೆಂದು ಒಪ್ಪುತ್ತಾನೆ. ಮತ್ತೆ ಒಂದು ಹೂವಿನ ಹೆಸರು ಸ್ಮರಿಸಲು ತಿಳಿಸಿ. ಅದನ್ನೂ ನೀವು ಸರಿಯಾಗಿ ತಿಳಿಸುತ್ತೀರಿ. ಇದೇ ರೀತಿಯಲ್ಲಿ ಕೆಲವು ವಿಷಯಗಳನ್ನು ತಿಳಿಸಿದಾಗ ಆತ ನಿಮ್ಮ ಕಾಲಿಗೆ ಬಿದ್ದು. ನಿಮ್ಮ ಶಕ್ತಿಯ ಬಗ್ಗೆ ಸಂದೇಹ ಪಟ್ಟಿದ್ದಕ್ಕೆ ಕ್ಷಮೆ ಬೇಡುತ್ತಾನೆ. ಪ್ರೇಕ್ಷಕರು ಸ್ಥಂಬೀಭೂತರಾಗುತ್ತಾರೆ.

ವಾಸ್ತವವಾಗಿ ಇಲ್ಲಿ ನಡೆದದ್ದೇನು? ಮೊದಲು ಬಂದ ವ್ಯಕ್ತಿ ನಿಜವಾಗಿಯೂ ನಿರ್ದೋಷಿ. ನಿಮ್ಮ "ಜನ" ಅಲ್ಲ. ಆದರೆ. ಆತನು ಪ್ರಯೋಗಕ್ಕೆ ಸೇರುವುದನ್ನು ಆಕ್ಷೇಪಿಸಿದ ವ್ಯಕ್ತಿ ನೀವೆ ಮೊದಲು ಹೇಳಿಟ್ಟವರು! ಈ ಪ್ರಯೋಗಕ್ಕೆ ಈ ಎರಡನೆಯ ವ್ಯಕ್ತಿಯಾಗಿ ಒಳ್ಳೆಯ ನಟನಾ ಚಾತುರ್ಯ ಉಳ್ಳವರನ್ನು ಆರಿಸಬೇಕು. ಈ ಪ್ರಯೋಗದ ಮೂಲಕ ಪ್ರೇಕ್ಷಕರಲ್ಲಿ ಅತೀಂದ್ರಿಯ ಶಕ್ತಿಯಿದೆಯೆಂದು ನಂಬಿಸುವುದು ಎಷ್ಟು ಸುಲಭವೆಂದು ತೋರಿಸಿಕೊಡಬಹುದು!

## ತೆಂಗಿನ ಕಾಯಿಯಿಂದ ಕೆಂಪು ಮತ್ತು ಹಸಿರು ನೀರು

ಭಕ್ತ ಪವಾಡ ಪುರುಷರಲ್ಲಿ ಪ್ರಶ್ನೆ ಕೇಳಲು ಹೋದಾಗ ಮಂತ್ರಿಸಿದ ತೆಂಗಿನ ಕಾಯಿ ಕೊಡಲಾಗುತ್ತದೆ. ಅದನ್ನು ಒಡೆದಾಗ ಒಳಗೆ ಕೆಂಪು ನೀರು! ಭಕ್ತನಿಗೆ ಗಾಬರಿಯಾಗುವುದು. ಬಳಿಕ, ವಿಘ್ನ ನಿವಾರಣೆಗೆ ಪೂಜೆ ಇತ್ಯಾದಿ ನಡೆದ ಬಳಿಕ, ಮತ್ತೊಂದು ತೆಂಗಿನ ಕಾಯಿ ಕೊಡಲಾಗುತ್ತದೆ. ಅದನ್ನು ಒಡೆದಾಗ ಒಳಗೆ ಹಸಿರು ನೀರು. ಭಕ್ತ ತನ್ನ ಕೆಲಸ ನಿರ್ವಿಘ್ನವಾಗಿ ನಡೆಯುವುದೆಂದು ಸಂತೋಷದಿಂದ ಹೋಗುತ್ತಾನೆ.

ತೆಂಗಿನ ಕಾಯಿಯಿಂದ ಬಣ್ಣದ ನೀರು ಬರಿಸುವುದು ಹೇಗೆ? ಸಿರಿಂಜ್ ಮತ್ತು ತೆಳ್ಳಗಿನ ಸೂಜಿಯ ಮೂಲಕ ತೆಂಗಿನ ಕಾಯಿಯ ಕಣ್ಣನ್ನು ಉಪಯೋಗಿಸಿ, ಒಳಗೆ ಬಣ್ಣದ ಶಾಯಿ ತುಂಬಿಸಲಾಗುತ್ತದೆ. ಬಳಿಕ ತೂತಾದ ಕಡೆ ಸ್ವಲ್ಪ ಕಪ್ಪಗಿನ ಮೇಣವನ್ನು ಸವರಿದರಾಯಿತು. ಸೂಜಿಯು ಚುಚ್ಚುವಾಗ ಉಂಟಾದ ಚಿಕ್ಕ ತೂತು ಮುಚ್ಚಿ ಹೋಗುತ್ತದೆ. ಪರೀಕ್ಷೆ ಮಾಡಿದವರಿಗೆ ತೆಂಗಿನ ಕಾಯಿ ಸರಿಯಾಗಿರುವಂತೆ ಕಾಣಿಸುವುದು.

ಈ "ಪವಾಡ"ದ ಮೂಲಕ ವೀಕ್ಷಕರಿಗೆ ತೆಂಗಿನ ಕಾಯಿ ಉಪಯೋಗಿಸಿ ಮಾಡುವ ಮೋಸವನ್ನು ತೋರಿಸಿಕೊಡಬಹುದು.



# ಪವಾಡಗಳು, ಅತೀಂದ್ರಿಯ ಘಟನೆಗಳನ್ನು ಶೋಧಿಸುವುದು ಹೇಗೆ?

ಇಂತಹ ಘಟನೆಗಳನ್ನು ಶೋಧಿಸಲು ಹೊರಡುವವರು ಮೊದಲು ತಮ್ಮ ಬುದ್ಧಿ ಶಕ್ತಿಯನ್ನು ತೀಕ್ಷ್ಣವಾಗಿ ಬೆಳೆಸಿಕೊಳ್ಳಬೇಕು. ಯಾಕೆಂದರೆ. ಸಾಮಾನ್ಯ ಜನರನ್ನು ಮೋಸ ಮಾಡಿ ಬಹಳ ಅಭ್ಯಾಸ. ಪರಿಣಿತಿಯುಳ್ಳ ವ್ಯಕ್ತಿಗಳೇ ಹೆಚ್ಚಾಗಿ ಇಂತಹ ಸೋಗು ಹಾಕಿಕೊಂಡಿರುತ್ತಾರೆ. ಇದಲ್ಲದೆ. ಇಂತಹ ಸೋಗು ಹಾಕಿರುವ ವ್ಯಕ್ತಿಗಳು ತಮ್ಮ ಸುತ್ತಲೂ ಗೂಂಡಾ. ಸಮಾಜಘಾತುಕ ಶಕ್ತಿಗಳ ಗುಂಪನ್ನೇ ಇರಿಸಿಕೊಂಡಿರುತ್ತಾರೆ. ಇದಲ್ಲದೆ. ಇವರು ಇರುವ ಸ್ಥಳಗಳಲ್ಲಿ ಇವರ "ಪವಾಡ"ಗಳ ಕಥೆಗಳು ಹಬ್ಬಿದಂತೆ ಜನ ಪ್ರವಾಹವು ಹೆಚ್ಚುತ್ತಿರುತ್ತದೆ. ತತ್ಕಾರಣ. ಇವರು ತಮ್ಮೂರುಗಳಲ್ಲಿ ಎಲ್ಲರಿಗೂ ಬೇಕಾದ ವ್ಯಕ್ತಿಗಳಾಗಿರುತ್ತಾರೆ. ಇವರ ಠಕ್ಕುತನವನ್ನು ತೋರಿಸಿಕೊಟ್ಟರೆ ಇವರೆಲ್ಲರಿಗೂ ಧಕ್ಕೆ ಒದಗುತ್ತದೆ. ತತ್ಕಾರಣ. ಇಂತಹ ಪ್ರಯತ್ನಗಳನ್ನು ಅವರು ವಿರೋಧಿಸುವುದು ಸ್ವಾಭಾವಿಕ.

ಮೊದಲನೆಯದಾಗಿ. ಇವರ ಗುಟ್ಟುಗಳನ್ನು ಅರಿಯಲು ಹೋಗುವವರು ಭಕ್ತರ ಸೋಗಿನಲ್ಲಿ ಹೋಗುವುದು ಉತ್ತಮ. ಹೀಗೆ ಹೋದಲ್ಲಿ ಈ ಪವಾಡ ಪುರುಷರು ನಡೆಸುವ ಕುಯುಕ್ತಿಗಳನ್ನು ಕಂಡು ಹಿಡಿಯುವುದು ಸುಲಭವಾಗುತ್ತದೆ. ಇವುಗಳನ್ನು ಕಂಡು ಹುಡುಕಿದ ಬಳಿಕ ನಾವೂ ಇವುಗಳನ್ನು ಮಾಡಿ ತೋರಿಸಿ. ಇಂತಹವುಗಳನ್ನು ನಡೆಸಲು ಯಾವುದೇ ಅತಿಮಾನುಷ ಶಕ್ತಿ ಬೇಡವೆಂದು ತೋರಿಸಿಕೊಡಬಹುದು. ಇದಲ್ಲದೆ. ಇವುಗಳನ್ನು ಮಾಡುವ ವಿಧಾನಗಳನ್ನೂ ಸೂಕ್ಷ್ಮವಾಗಿ ಪ್ರದರ್ಶಿಸಬಹುದು.

ಎರಡನೆಯ ಹಂತವಾಗಿ. ಈ ಪವಾಡ ಪುರುಷರಿಗೆ ನಮ್ಮ ಸಮ್ಮುಖದಲ್ಲಿ ನಾವು ವಿಧಿಸಿದ ಶರತ್ತುಗಳಲ್ಲಿ ಅವುಗಳನ್ನು ಮಾಡಿ ತೋರಿಸುವ ಸವಾಲನ್ನು ಎಸೆಯಬಹುದು. (ಇಂತಹ ಸವಾಲುಗಳನ್ನು ನಾವು ಈಗಾಗಲೇ ಮಾಡಿದ್ದೇವೆ. ಅವುಗಳನ್ನು ಈ ಪುಸ್ತಕದ ಕೊನೆಯಲ್ಲಿ ಕೊಟ್ಟಿದ್ದೇವೆ ).

ಮೂರನೆಯ ಹಂತವಾಗಿ. ಈ ಪವಾಡಗಳನ್ನು ನಡೆಸುವಲ್ಲಿಗೆ ಹೋಗಿ. ನಾವೇ ಅವುಗಳನ್ನು ಮಾಡಿ ತೋರಿಸಿ. ಇವುಗಳಲ್ಲಿ ಹುರುಳಿಲ್ಲವೆಂಬುದನ್ನು ಸ್ಪಷ್ಟ ಪಡಿಸಬಹುದು. ಆದರೆ. ಈ ಕೊನೆಯದ್ದು ಮಾಡಲು ಸ್ವಲ್ಪ ಕಷ್ಟವಿದೆ ಯಾಕೆಂದರೆ. ಈ ಪವಾಡ ಪುರುಷರುಗಳು ತಮ್ಮದೇ ಆದ ಗೂಂಡಾಗಳನ್ನು ಪೋಷಿಸಿರುತ್ತಾರೆ. ಅವರು ನಮ್ಮ ಮೇಲೆ

ದೈಹಿಕ ಆಕ್ರಮಣಗಳನ್ನು ಮಾಡಲು ಹೇಸದವರು. ಇದಲ್ಲದೆ. ಇಂತಹ ಪವಾಡ ಪುರುಷರ ಅಸ್ತಿತ್ವರಿಂದ ಲಾಭ ಪಡೆಯುವ ಊರಿನ ಜನಗಳೂ ತಮ್ಮ ವ್ಯಾಪಾರಗಳಿಗೆ ಧಕ್ಕೆಯೊದಗುವ ಕಾರಣ. ಇವರನ್ನು ಬೆಂಬಲಿಸುತ್ತಿರುತ್ತಾರೆ. ಈ ಪವಾಡ ಪುರುಷರನ್ನು ಬಯಲಿಗೆಳೆಯುವ ಪ್ರಯತ್ನಗಳಿಗೆ ಅವರು ವಿರೋಧವೂ ಸ್ವಾಭಾವಿಕವಾಗಿ ಕಂಡು ಬರುತ್ತದೆ.

ಇವೆಲ್ಲರವುಗಳಿಗಿಂತಲೂ ಉತ್ತಮವಾದ ವಿಧಾನವೇನೆಂದರೆ ಜನ ಜಾಗ್ರತೆ ಹುಟ್ಟಿಸಿ. ಅವರಲ್ಲಿ ಪವಾಡಗಳ ರಹಸ್ಯಗಳನ್ನು ಬಯಲಿಗೆಳೆಯುವ ಮನೋಭಾವವನ್ನು ಬೆಳೆಸುವುದು. ಈ ನಿಟ್ಟಿನಲ್ಲಿ ಈ ಪುಸ್ತಕ. ಹಾಗೂ ನಾವು ರಾಜ್ಯಾದ್ಯಂತ ನಡೆಸಿರುವ ಮತ್ತು ನಡೆಸಲಿರುವ ಕಾರ್ಯಕ್ರಮಗಳು ಯಶಸ್ವಿಯಾದಾವೆಂದು ಆಶಿಸುತ್ತೇವೆ.



# ಪವಾಡ ಪುರುಷರುಗಳಿಗೆ ಸವಾಲುಗಳು

1ನೇ ಫೆಬ್ರವರಿ. 1992

1976ರ ಇಸವಿಯಿಂದ ದ.ಕ. ಜಿಲ್ಲಾ ವಿಚಾರವಾದಿ ಸಂಘದ ಪರವಾಗಿ ನಾನು. ಈ ಸಂಘದ ಕಾರ್ಯದರ್ಶಿಯಾದ ನರೇಂದ್ರ ನಾಯಕ್ ಪವಾಡ. ಅತೀಂದ್ರಿಯ ಶಕ್ತಿ ಮತ್ತು ಅತಿಮಾನುಷ ಶಕ್ತಿಗಳನ್ನು ಹುಡುಕಿಕೊಂಡಿದ್ದೇನೆ. 1989ರಲ್ಲಿ ಇಂತಹ ಶಕ್ತಿಗಳನ್ನು ತೋರಿಸುವವರಿಗೆ ರೂ. 25,000ದ ಬಹುಮಾನವನ್ನು ಘೋಷಿಸಿದ್ದೇನೆ. ಈ ಬಹುಮಾನದ ಮೊತ್ತಕ್ಕೆ ಯಾರೂ ಬಾರದ ಕಾರಣ. 1990ರಲ್ಲಿ ಇದನ್ನು ದ್ವಿಗುಣಗೊಳಿಸಿ. ರೂ. 50,000ವನ್ನು ನಿಗದಿ ಮಾಡಲಾಯಿತು. ಈಗಿನವರೆಗೂ ಈ ಪಣಕ್ಕೆ ಯಾರೂ ಮುಂದೆ ಬಾರದ ಕಾರಣ. 1992ರಲ್ಲಿ ನಮ್ಮ ಸಂಘವು ಈ ಹಣದ ಮೌಲ್ಯವನ್ನು ಹೆಚ್ಚಿಸಲು ಆಜ್ಞಾಪಿಸಿದೆ. ತತ್ಕಾರಣ. ಮುಂದೆ ಈ ಕೆಳಗಿನ ಸವಾಲುಗಳಲ್ಲಿ ಯಾವುದಾದರೂ ಒಂದು ಯಾ ಅಧಿಕವನ್ನು ನಮ್ಮ ಶಕ್ತಿಗಳಿಗನುಗುಣವಾಗಿ ಮಾಡಿತೋರಿಸಿದಲ್ಲಿ ನನ್ನ ಎಲ್ಲಾ ಲೌಕಿಕ ಸಂಪತ್ತನ್ನು ಪಣವಾಗಿ ಒಡ್ಡಿದ್ದೇನೆ. ಇದಲ್ಲದೆ. ಇದನ್ನು ಮಾಡಿ ತೋರಿಸಿದ ವ್ಯಕ್ತಿ ಹೇಳಿದ ಯಾವುದೇ ಕಾರ್ಯಕ್ಕೆ ನನ್ನ ಉಳಿದ ಜೀವನವನ್ನು ಮೀಸಲಾಗಿಡುತ್ತೇನೆ. ನಾನು ಮುಂದೆ ಸಂಪಾದಿಸಬಹುದಾದ ಯಾವುದೇ ಹಣ. ಆಸ್ತಿ – ಪಾಸ್ತಿಯ ಮೇಲೆ ನನ್ನ ಯಾವುದೇ ಹಕ್ಕಿರದೆ ಅವೆಲ್ಲವೂ ಸವಾಲು ಮಾಡಿ ತೋರಿಸಿದವರಿಗೆ ಮೀಸಲಾಗಿರುತ್ತದೆ (ನನ್ನ ಈಗಿನ ಲೌಕಿಕ ಸಂಪತ್ತಿನ ಧೃಡೀಕರಿಸಿದ ಪ್ರಮಾಣ ಪತ್ರವನ್ನು ಆಡಿಟರ್‌ರಿಂದ ಪಡೆಯಬಹುದು. ಇದಕ್ಕೆ ರೂ. 250ರ ಶುಲ್ಕವನ್ನು ಮುಂಚಿತವಾಗಿ ಕೊಡತಕ್ಕದ್ದು).

ಮಾಡಿ ತೋರಿಸಬಹುದಾದ ಪವಾಡಗಳು ಯಾ ಅತೀಂದ್ರಿಯ ಶಕ್ತಿಯ ಪ್ರದರ್ಶನಗಳ ಸಾಮಾನ್ಯವಾದ ವಿವರಣೆಗಳು ಕೆಳಗಿವೆ (ವಿವರವಾದ ಶರ್ತಗಳನ್ನು ಇವುಗಳನ್ನು ಪ್ರದರ್ಶಿಸುವ ಮೊದಲು ಬರವಣಿಗೆ ಒಪ್ಪಂದವಲ್ಲಿ ವಿಧಿಸಲಾಗುವುದು).

1. ನೀರಿನ ಮೇಲೆ ಮೂರು ಹೆಜ್ಜೆ ನಡೆಯುವುದು.

2. ನೆಲದಿಂದ 2 ಅಡಿ 20 ಸೆಕೆಂಡುಗಳ ಕಾಲ ತೇಲುವುದು.

3. ಕೆಂಡಗಳ ಮೇಲೆ ಬರಿಗಾಲಿನಲ್ಲಿ 30 ಸೆಕೆಂಡುಗಳ ಕಾಲ ನಿಂತು ಕಾಲಿಗೆ ಯಾವುದೇ ಹಾನಿಯಾಗದಿರುವುದು.

4. ನೀರನ್ನು ಪೆಟ್ರೋಲ್. ದ್ರಾಕ್ಷಾ ರಸ ಯಾ ಇತರ ಯಾವುದೇ ದ್ರವವನ್ನಾಗಿ ಪರಿವರ್ತಿಸುವುದು.

5. ನಾನು ಕೇಳಿದ ವಸ್ತುವನ್ನು 10 ಸೆಕೆಂಡುಗಳೊಳಗೆ ಶೂನ್ಯದಿಂದ ಸೃಷ್ಟಿಸುವುದು.

6. ಫೋಟೋ ತೆಗೆದ ಬಳಿಕ ನೆಗೆಟಿವ್‌ನಿಂದ ಕಾಣೆಯಾಗುವುದು.

7. ಬೀಗ ಹಾಕಿದ ಕೋಣೆಯಿಂದ ಅದೃಶ್ಯನಾಗುವುದು.

8. ಯಾವುದೇ ಅತೀಂದ್ರಿಯ, ಅತಿಮಾನುಷ ಶಕ್ತಿಯಿಂದ ಲಕೋಟೆಯಲ್ಲಿ ಮೊಹರು ಮಾಡಲಾದ ನೋಟಿನ ನಂಬರನ್ನು ಓದುವುದು.

9. ಮುಂದೆ ನಡೆಯಬಹುದಾದ ನಾವು ತಿಳಿಸಿದ ವಿಷಯವನ್ನು, ನಾವು ತಿಳಿಸಿದ ನಿಖರತೆಗೆ ಅನುಗುಣವಾಗಿ ಮುನ್ಸೂಚಿಸುವುದು.

10. ನಾವು ತೋರಿಸಿದ ನೋಟಿನ ದ್ವಿಪ್ರತಿಯನ್ನು ಸೃಷ್ಟಿಸುವುದು. ಅದರ ಮೌಲ್ಯ ಕ್ರಮಾಂಕವೆಲ್ಲವೂ ಅದೇ ಇರಬೇಕು.

11. ನಾವು ತೋರಿಸಿದ, ನಾವೇ ನಿರ್ಧರಿಸಿದ ರೋಗವುಳ್ಳ 10 ರೋಗಿಗಳಲ್ಲಿ ಕನಿಷ್ಠ ಐದು ಮಂದಿಯನ್ನು ಯಾವುದೇ ಔಷಧ, ಪಥ್ಯಗಳ ನಿರ್ಬಂಧವಿಲ್ಲದೆ, ಬರೇ ಪ್ರಾರ್ಥನೆ ಯಾ ಇತರ ಅತಿಮಾನುಷ ಶಕ್ತಿಯಿಂದ ನಾವು ನಿಖರ ಪಡಿಸಿದ ಅವಧಿಯೊಳಗೆ ಗುಣಪಡಿಸುವುದು.

12. ಕೊಟ್ಟ ಹತ್ತು ಜನ್ಮ ದಿನಾಂಕ, ಸ್ಥಳ ಮತ್ತು ಸಮಯಗಳನ್ನು ಉಪಯೋಗಿಸಿ, ಜಾತಕವನ್ನು ರಚಿಸಿ, ಯಾರು ಗಂಡು, ಯಾರು ಹೆಣ್ಣು, ಯಾರು ಬದುಕಿದ್ದಾರೆ, ಯಾರು ಸತ್ತಿದ್ದಾರೆಂದು 95 % ನಿಖರತೆಯ ಮಿತಿಯಲ್ಲಿ ಫಲಜ್ಯೋತಿಷ್ಯದ ಸೂತ್ರಗಳಂತೆ ತಿಳಿಸುವುದು.

13. ಇವಲ್ಲದೆ, ಇವಕ್ಕೆ ಹೊರತಾದ ಅತಿಮಾನುಷ, ಅತೀಂದ್ರಿಯ ಯಾ ಇತರ ಯಾವುದೇ ಸವಾ ಸದೃಶ ಶಕ್ತಿಯನ್ನು ಹೊಂದಿರುವ ಯಾ ತೋರಿಸಿಕೊಳ್ಳುವವರು ಆ ಬಗ್ಗೆ ಮೊದಲೇ ನಿಷ್ಕರ್ಷ ಮಾಡಿಕೊಂಡು ಅವುಗಳನ್ನು ತೋರಿಸಲು ಮುಂದಾದಲ್ಲಿ ಅಂತಹವರಿಗೂ ಪಣಗಳನ್ನು ಒಡ್ಡಲಾಗುವುದು. ಪಣದ ಮೊತ್ತ ಇತ್ಯಾದಿಗಳು ಮಾಡಿ ತೋರಿಸಬಹುದಾದ ವಿಷಯಗಳನ್ನು ಹೊಂದಿಕೊಂಡಿರುತ್ತದೆ.

## ಶರತ್ತುಗಳು

1. ಪಣವು ಬರೇ ಮೇಲ್ಕಾಣಿಸಲಾದ ಕ್ರಿಯೆಗಳನ್ನು ಮಾಡಿ ತೋರಿಸುವುದಕ್ಕೆ ಸೀಮಿತವಾಗಿದೆ. ಈ ಬಗ್ಗೆ ಯಾವುದೇ ಐತಿಹಾಸಿಕ ಪುರಾವೆಗಳು, ಮುದ್ರಿತ

ದಾಖಲೆಗಳು, ಪ್ರಕಟಿತ ಯಾ ಅಪ್ರಕಟಿತ ಸಾಕ್ಷಿ ವೃತ್ತಾಂತಗಳನ್ನು ಸ್ವೀಕರಿಸಲಾಗುವುದಿಲ್ಲ.

2. ಮಾನಸಿಕ ರೋಗಗಳಿಂದ ಬಳಲುವವರು 21 ವರ್ಷಕ್ಕಿಂತ ಕಡಿಮೆ ವಯಸ್ಸಿನವರು ಯಾ ಇತರರ ಪರವಾಗಿ ಪಣಗಳನ್ನು ಒಡ್ಡುವವರಿಂದ ಸವಾಲುಗಳನ್ನು ಸ್ವೀಕರಿಸಲಾಗುವುದಿಲ್ಲ.

3. ಸಂಬಂಧ ಪಟ್ಟ ಪ್ರಯೋಗವನ್ನು ಮಾಡಿ ತೋರಿಸುವ 24 ಗಂಟೆಗಳ ಮೊದಲು ಎಲ್ಲಾ ಶರತ್ತುಗಳನ್ನು ವಿವರವಾಗಿ ಅಗತ್ಯದ ಮೌಲ್ಯದ ಸ್ಟಾಂಪು ಕಾಗದದ ಮೇಲೆ ದಾಖಲಿಸಿ, ಈ ಬಗ್ಗೆ ಶರತ್ತನ್ನು ರಚಿಸಲಾಗುವುದು.

4. ಪಣವನ್ನೊಡ್ಡುವವರು ಭದ್ರತಾ ಠೇವಣಿಯಾಗಿ ರೂ. 1000ವನ್ನು ನನ್ನಲ್ಲಿ ಇರಿಸಬೇಕು. ಅವರು ಶರ್ತಗಳಿಗನ್ವಯ ಪ್ರಯೋಗವನ್ನು ಮಾಡಿ ತೋರಿಸಿ ಗೆದ್ದಲ್ಲಿ ಮಾತ್ರ ಈ ಹಣವನ್ನು ಹಿಂದಿರುಗಿಸಲಾಗುವುದು. ಇಲ್ಲವಾದಲ್ಲಿ ಈ ಮೊತ್ತವನ್ನು ಕಳಕೊಳ್ಳುತ್ತಾರೆ.

5. ಶರ್ತಗಳನ್ವಯ ಪ್ರಯೋಗಗಳನ್ನು ಮಂಗಳೂರಿನಲ್ಲಿಯೇ ಪೂರ್ವ ನಿರ್ಧರಿತ ದಿನಾಂಕ, ಸಮಯದಂದು ನಡೆಸಲಾಗುವುದು. ಈ ಬಗ್ಗೆ ನಡೆಯುವ ಖರ್ಚು – ವೆಚ್ಚಗಳನ್ನು ಪ್ರಯೋಗವನ್ನು ಮಾಡಿ ತೋರಿಸುವವರೇ ಭರಿಸತಕ್ಕದ್ದು. ಪ್ರಯೋಗ ನಡೆಸುವ ಸಮಯದಲ್ಲಿ ಯಾವುದೇ ಹಾನಿ, ಜೀವ ನಷ್ಟಕ್ಕೆ ಪಣವೊಡ್ಡಿದ ನಾನು ಜವಾಬ್ದಾರನಲ್ಲ. ಮಂಗಳೂರಿಗೆ ಪ್ರಯಾಣಿಸುವ ಖರ್ಚು, ತಿಂಡಿ, ಊಟ, ವಸತಿ ಯಾ ಇತರ ಯಾವುದೇ ಖರ್ಚಿಗೆ ನಾನು ಜವಾಬ್ದಾರನಲ್ಲ.

ಪವಾಡ ಪುರುಷರು, ಅತಿಮಾನುಷ ಶಕ್ತಿಯುಳ್ಳವರು, ಫಲಜ್ಯೋತಿಷ್ಯರು, ಅತೀಂದ್ರಿಯ ಶಕ್ತಿಯುಳ್ಳವರು ವಿಪುಲವಾಗಿ ಹಬ್ಬಿರುವ ನಮ್ಮ ಕರ್ನಾಟಕ ರಾಜ್ಯದ ಮೂಲೆ– ಮೂಲೆಗಳಿಂದಲೂ ಈ ಸವಾಲುಗಳನ್ನು ಸ್ವೀಕರಿಸುವವರು ಮುಂದೆ ಬಂದಾರೆಂದು ಹಾರೈಸುತ್ತೇನೆ.

(ನರೇಂದ್ರ ನಾಯಕ್)
ಕಾರ್ಯದರ್ಶಿ
ದ.ಕ.ಜಿಲ್ಲಾ ವಿಚಾರವಾದಿ ಸಂಘ
ಮೈಕ್ರೋವೇವ್ ಸ್ಟೇಷನ್ ರಸ್ತೆ,
ಮಂಗಳೂರು – 575 006

## ಚಂದಾ ದರ

| | | |
|---|---|---|
| **ಬಾಲ ವಿಜ್ಞಾನ** | | |
| ಬಿಡಿ ಪತ್ರಿಕೆ | ರೂ. | 5 – 00 |
| **ವಾರ್ಷಿಕ ಚಂದಾ** | | |
| ವಿದ್ಯಾರ್ಥಿಗಳು, ಇತರರು | ರೂ. | 40 – 00 |
| ಸಂಘ ಸಂಸ್ಥೆಗಳು | ರೂ. | 50 – 00 |
| ಆಜೀವ ಸದಸ್ಯತ್ವ | ರೂ. | 500 – 00 |
| **ವಿಜ್ಞಾನ ದೀಪ (ಭಿತ್ತಿ ಪತ್ರಿಕೆ)** | | |
| ಬಿಡಿ ಪತ್ರಿಕೆ | ರೂ. | 2 – 00 |
| ವಾರ್ಷಿಕ ಚಂದಾ | ರೂ. | 20 – 00 |

**ಚಂದಾಹಣ ರವಾನೆ**

ಸರಿಯಾದ ವಿಳಾಸ ಸಹಿತ ಚಂದಾ ಹಣವನ್ನು ಎಂ.ಓ. ಅಥವಾ ಡ್ರಾಫ್ಟ್ ಮೂಲಕ **ಗೌರವ ಕಾರ್ಯದರ್ಶಿ, ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು, ಇಂಡಿಯನ್ ಇನ್ಸ್ಟಿಟ್ಯೂಟ್ ಆಫ್ ಸೈನ್ಸ್ ಆವರಣ, ಬೆಂಗಳೂರು – 560012, ☎ 3340509 –** ಈ ವಿಳಾಸಕ್ಕೆ ಕಳಿಸಬೇಕು. ಹಣ ತಲುಪಿದ ಮುಂದಿನ ತಿಂಗಳಿಂದ ಪತ್ರಿಕೆಯನ್ನು ಕಳಿಸಲಾಗುವುದು. ಕಛೇರಿಯೊಡನೆ ವ್ಯವಹರಿಸುವಾಗ ಡ್ರಾಫ್ಟ್ ಅಥವಾ ಎಂ.ಓ. ಕಳಿಸಿದ ದಿನಾಂಕ ಹಾಗೂ ಚಂದಾ ಸಂಖ್ಯೆಯನ್ನು ನಮೂದಿಸಿರಿ.

## ವಿಜ್ಞಾನ ವಿಷಯಗಳ ವರ್ಣಪಾರದರ್ಶಿಕೆಗಳು

| ವಿಜ್ಞಾನದ ವಿಷಯಗಳು | ಪಾರದರ್ಶಿಕೆಗಳ ಸಂಖ್ಯೆ | ಬೆಲೆ |
|---|---|---|
| 1. ಖಗೋಳ ವಿಜ್ಞಾನ | 60 | ರೂ.600/- |
| 2. ಶಿಲೆಗಳು ಹಾಗೂ ಖನಿಜಗಳು | 48 | ರೂ.500/- |
| 3. ಭೂಕಂಪ | 38 | ರೂ.400/- |
| 4. ಮಾನವ ಹಾಗೂ ಪರಿಸರ | 65 | ರೂ.650/- |
| 5. ಹಾವುಗಳು | 56 | ರೂ.550/- |
| 6. ಆರೋಗ್ಯ | 48 | ರೂ.500/- |

ಆಸಕ್ತ ಶಾಲಾ ಶಿಕ್ಷಕರು ಈ ವರ್ಣಪಾರದರ್ಶಿಕೆಗಳನ್ನು ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತಿನಿಂದ ಖರೀದಿಸಬಹುದಾಗಿದೆ. ಹಣವನ್ನು ಎಂ.ಓ / ಡಿ.ಡಿ. ಮೂಲಕ ಕಾರ್ಯದರ್ಶಿ, ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು, ಇಂಡಿಯನ್ ಇನ್ಸ್ಟಿಟ್ಯೂಟ್ ಆಫ್ ಸೈನ್ಸ್ ಆವರಣ, ಬೆಂಗಳೂರು – 560 012. ಈ ವಿಳಾಸಕ್ಕೆ ಸಂದಾಯವಾಗುವಂತೆ ಕಳುಹಿಸಿ ಪಡೆದುಕೊಳ್ಳಬಹುದು.

# ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು

ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್ ಆವರಣ

**ಬೆಂಗಳೂರು – 560 012**

| | | |
|---|---|---|
| ಅಧ್ಯಕ್ಷರು | : | ಡಾ. ಎಸ್.ಜೆ. ನಾಗಲೋಟಿಮಠ |
| ಉಪಾಧ್ಯಕ್ಷರು | : | ಪ್ರೊ. ಸಿ.ಡಿ. ಪಾಟೀಲ |
| | | ಶ್ರೀ ಬಿ.ಬಿ. ಹಂಡರಗಲ್ |
| ಕಾರ್ಯದರ್ಶಿ | : | ಶ್ರೀಮತಿ. ಶ್ರೀಮತಿ ಹರಿಪ್ರಸಾದ್ |

ರಾಜ್ಯದಲ್ಲಿ ವಿಜ್ಞಾನ ಚಳುವಳಿಯನ್ನು ಬೆಳೆಸಲು ಪರಿಷತ್ತಿಗೆ ಸಕ್ರಿಯವಾಗಿ ಸಹಾಯ ಮಾಡಿರಿ.

ನಿಮ್ಮ ಊರಿನಲ್ಲಿ, ಸಂಸ್ಥೆಯಲ್ಲಿ, ಪರಿಷತ್ತಿನ ಘಟಕವನ್ನು ಸ್ಥಾಪಿಸಲು ಮುಂದಾಗಿರಿ.

ಪರಿಷತ್ತು ವಿಜ್ಞಾನ ಪ್ರಸಾರಕ್ಕಾಗಿ ಜನ್ಮ ತಾಳಿದುದಾದರೂ ಅದು ವಿಜ್ಞಾನಿಗಳದ್ದಲ್ಲ. ನಿಮ್ಮೆಲ್ಲರದು ಎಂಬುದನ್ನು ನೆನಪಿನಲ್ಲಿಡಿರಿ. ನೀವು ವಿಜ್ಞಾನ ಕಲಿತಿರದಿದ್ದರೂ ಪರಿಷತ್ತಿಗೆ ಸದಸ್ಯರಾಗಬಹುದು. ವಿಜ್ಞಾನ ಮುಖೇನ ಜನ ಸೇವೆ ಮಾಡಲು ಪರಿಷತ್ತು ಒಂದು ಮಾಧ್ಯಮ.

ವಿಜ್ಞಾನ ಪರಿಷತ್ತು ಯಾವುದೇ ರಾಜಕೀಯಕ್ಕೂ ಸಂಬಂಧ ಪಡದ ಸ್ವಾಯತ್ತ ಸಂಸ್ಥೆ. ಅದರಿಂದ ನಿಮ್ಮ ವೈಯಕ್ತಿಕ ನಂಬುಗೆಗಳೇನೇ ಇರಲಿ, ವಿಜ್ಞಾನ ಪರಿಷತ್ತಿನ ಬಾಗಿಲು ಸದಾ ನಿಮಗೆ ತೆರೆದಿದೆ. ಅದಕ್ಕೆ ನಿಮ್ಮ ಬೆಂಬಲ ಅಗತ್ಯ.

ಹೆಚ್ಚಿನ ವಿವರಗಳಿಗೆ ಕಾರ್ಯದರ್ಶಿಗಳಿಗೆ ಬರೆಯಿರಿ.

## ಭಾರತ ಜನ ಜ್ಞಾನ ವಿಜ್ಞಾನ ಜಾಥ - 1992

ವಿಜ್ಞಾನ ನಾಗಾಲೋಟದಿಂದ ಬೆಳೆಯುತ್ತಾ ಇದೆ. ಈ ಕೆಲವು ದಶಕಗಳಲ್ಲಿ ಅದ್ಭುತವಾದ ವೈಜ್ಞಾನಿಕ ಪ್ರಗತಿಯನ್ನು ಸಾಧಿಸಿದೆ. ಇದನ್ನು ವಿಜ್ಞಾನ ಯುಗವೆಂದೂ ಕರೆಯುತ್ತಾರೆ.

ಜನಜೀವನ, ಸಮಾಜದ ಬೆಳವಣಿಗೆಗೆ ವಿಜ್ಞಾನ ಮತ್ತು ತಂತ್ರಜ್ಞಾನ ಬಹು ಮುಖ್ಯ. ಇವುಗಳು ಇಲ್ಲದೇ ಹೋದರೆ ಸಮಾಜ ಪ್ರಗತಿ ಹೊಂದಲು ಸಾಧ್ಯವೇ ಇಲ್ಲ. ಆದರೆ ವಿಜ್ಞಾನಕ್ಕಿಂತ ಹೆಚ್ಚು ಮುಖ್ಯ ವೈಜ್ಞಾನಿಕ ಮನೋಭಾವ ಎಂಬುದು ಸರ್ಕಾರಕ್ಕಾಗಲಿ ಅಥವಾ ಶಿಕ್ಷಣ ತಜ್ಞರಿಗಾಗಲಿ ಅಷ್ಟಾಗಿ ತಿಳಿದಿಲ್ಲ. ವ್ಯಕ್ತಿಯ ಮತ್ತು ಸಮಾಜದ ಎಲ್ಲಾ ಸಮಸ್ಯೆಗಳನ್ನು ತಿಳಿದುಕೊಳ್ಳಲು ಮತ್ತು ಅವುಗಳನ್ನು ಬಿಡಿಸಲು ವೈಜ್ಞಾನಿಕ ಮಾರ್ಗ ಅತ್ಯಂತ ಶ್ರೇಷ್ಠವಾದುದು. ಇದರ ಅಭಾವದಿಂದ ನಮ್ಮ ಸಮಾಜದಲ್ಲಿ ಹಲವು ಸಮಸ್ಯೆಗಳನ್ನು ಎಲ್ಲಾ ಕ್ಷೇತ್ರಗಳಲ್ಲಿಯೂ ನಾವು ನೋಡುತ್ತಿರುತ್ತೇವೆ. ವಿಜ್ಞಾನಯುಗದಲ್ಲೂ ಅಸಂಖ್ಯಾತ ಅವೈಚಾರಿಕ ಮೂಢನಂಬಿಕೆಗಳು ಭದ್ರವಾಗಿ ಪೀಠಸ್ಥವಾಗಿವೆ. ಧಾರ್ಮಿಕ ಕ್ಷೇತ್ರದಲ್ಲಿ ಮತಾಂಧತೆ, ಮೂಲಭೂತವಾಗಿ ಬೆಳೆಯುತ್ತಾ ಇದೆ. ಆರೋಗ್ಯ ಮತ್ತು ಉಳಿದ ಹಲವು ಕ್ಷೇತ್ರಗಳಲ್ಲಿಯೂ ಅವೈಜ್ಞಾನಿಕ ನಂಬಿಕೆಗಳಿಗೆ ಈಗಲೂ ಪುಷ್ಟಿ ಸಿಗುತ್ತಾ ಇದೆ.

ಆದುದರಿಂದ ವಿಜ್ಞಾನವನ್ನು ಮತ್ತು ವೈಜ್ಞಾನಿಕ ಮನೋಭಾವವನ್ನು ವ್ಯವಸ್ಥಿತವಾಗಿ ಸಾಮಾನ್ಯ ಜನರಲ್ಲಿ ತಿಳುವಳಿಕೆ ಕೊಡುವ ಉದ್ದೇಶದಿಂದ ಈ ಒಂದು ಬೃಹತ್ ಪ್ರಮಾಣದ ಜನ ವಿಜ್ಞಾನ ಜಾಥಾ ಯೋಜನೆಯನ್ನು ಕೈಗೊಳ್ಳಲಾಗಿದೆ.

ಇದನ್ನು ನಮ್ಮ ರಾಜ್ಯದಲ್ಲಿ ಕಾರ್ಯಗತ ಮಾಡಲು, ಈ ವಿಜ್ಞಾನ-ವೈಜ್ಞಾನಿಕ ಮನೋಭಾವದ ಸಂದೇಶವನ್ನು ನಮ್ಮ ರಾಜ್ಯದ ಮೂಲೆ ಮೂಲೆಗಳಿಗೂ ತೆಗೆದುಕೊಂಡು ಹೋಗುವ ಕಾರ್ಯವನ್ನು ಬಿ.ಜೆ.ಪಿ.ವಿ.ಜೆ. - 92 ಹಮ್ಮಿಕೊಂಡಿದೆ.

ಇದರ ಯಶಸ್ವಿಗೆ ಎಲ್ಲಾ ಜನರೂ ತಮ್ಮ ಸಂಪೂರ್ಣ ಸಹಕಾರವನ್ನು ಕೊಡಬೇಕೆಂದು ನಮ್ಮ ಕಳಕಳಿಯ ವಿನಂತಿ.

ಹೆಚ್.ಎಸ್. ನಿರಂಜನಾರಾಧ್ಯ
ಕಾರ್ಯದರ್ಶಿ

ಡಾ|| ಹೆಚ್. ನರಸಿಂಹಯ್ಯ
ಅಧ್ಯಕ್ಷರು

ಬೆಲೆ : 12-00